# ಸೋಲು



ರಮಾನಂದ ಅಮೀನ್.



ಪ್ರಕಾಶಕರು:
ಚಂದ್ರಸಾಗರ ಪ್ರಕಾಶನ
ಗವರ್ನಮೆಂಟ್ ನ್ಯೂ ಬಿಲ್ಡಿಂಗ್—1 ಬ್ಲಾಕ್ 5.
ನಂಬ್ರ 70ನೇ ಡಿ. ಡಿ. ಚಾಲಿನ ಎದುರು.
ವರ್ಲಿ, ಮುಂಬಯಿ 18.

# ಎರಡು ಮಾತು.

ಈ ಕಾದಂಬರಿಯನ್ನು ಬರೆದು ಕೆಲವು ವರುಷಗಳಾದುವು. ಆದರೆ ಪ್ರಕಟಿಸುವ ಸುಯೋಗವು ಬಂದುದು ಇದೀಗಲೆ. ಬರೆಯ ಬೇಕೆಂದಿರುವವರಿಗೆ ಇದು ನಿರಾಶೆಯನ್ನು ಉಂಟುಮಾಡುವುದು. ಕೊನೆಗಾದರೂ ಪ್ರಕಟಿಸಲ್ಪಟ್ಟಿತೆಂಬುದೇ ಸಂತೋಷ.

ಹೊಸ ಲೇಖಕನಾದುದರಿಂದ ಪ್ರಕಾಶಕರು ತಮ್ಮ ಕೈಗೆ ಈ ಪುಸ್ತಕವನ್ನು ತೆಗೆದುಕೊಳ್ಳಲು ಮುಂದಾಗಲಿಲ್ಲ. ಈ ಪುಸ್ತಕವನ್ನು ಓದಿದ ಗೆಳೆಯರು ಪ್ರಕಟಿಸಬೇಕೆಂಬುದಾಗಿ ಒತ್ತಾಯ ಮಾಡಿದರು. ಕಡೆಗೆ ನನ್ನ ಕಾಲುಗಳ ಬಲವನ್ನು ನೋಡಿಯೇ ಪ್ರಕಟಿಸಲು ಮುಂದಾಗಬೇಕಾಯಿತು. ಅದಕ್ಕೆ ಇಷ್ಟು ವರುಷಗಳು ಬೇಕಾದುವು. ಆದರೆ ಕಡೆಗೂ ಗೆಳೆಯರ ಹಂಗಿನಲ್ಲಿಯೇ ಇರಬೇಕಾಗುತ್ತದೋ ಎಂಬ ಹೆದರಿಕೆ ಕಡಿಮೆಯಾಗಿಲ್ಲ. ಮನುಷ್ಯನು ತನ್ನ ಬದುಕಿನಲ್ಲಿ ಹಲವು ಕಷ್ಟನಷ್ಟಗಳಿಗೆ ಗುರಿಯಾಗುತ್ತಾನೆ. ಎಡವಿ ಬೀಳುತ್ತಾನೆ. ಎದ್ದು ಕಾಲುಗಳನ್ನು ಒರಸಿಕೊಂಡು ಮುಂದೆ ಸಾಗುತ್ತಾನೆ. ಹಿಂದೆ ನಡೆದುದನ್ನೆಲ್ಲಾ ನೆನೆದುಕೊಳ್ಳುತ್ತಾನೆ. ನನ್ನ ಪರಿಸ್ಥಿತಿಯು ಹೀಗೆಯೇ.

ಕನ್ನಡ ಸಾಹಿತ್ಯ ಇನ್ನಷ್ಟು ಬೆಳೆಯಬೇಕೆಂದು ನಾವೆಲ್ಲರೂ ಆಶೆಪಡುತ್ತೇವೆ. ಆ ದಾರಿಯಲ್ಲಿ ನನ್ನದಿದು ಸಣ್ಣ ಪ್ರಯತ್ನ. ಎಲ್ಲರೂ ಪ್ರೀತಿ ಸೌಹಾರ್ದತೆಯನ್ನು ತೋರಿಸಿದರೆ ಮುಂದೆ ಸಾಗಬಲ್ಲೆನೆಂಬುದಾಗಿ ಪ್ರಕಟಣಾ ಕಾರ್ಯಕ್ಕೆ ಕೈಹಾಕಿರುವೆನು. ಎಲ್ಲರೂ ಕೈಲಾದ ರೀತಿಯಲ್ಲಿ ತಮ್ಮ ಸಹಾಯವನ್ನು ಸಲ್ಲಿಸಿ ನೆರವೀಯಬೇಕೆಂದು ಬಿನ್ನವಿಸುವೆ.

ಮಂಗಳೂರು ಧರ್ಮಪ್ರಕಾಶ ಛಾಪಖಾನೆಯ ಒಡೆಯರು ಈ ಪುಸ್ತಕವನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟು ನೆರವಾದುದಕ್ಕಾಗಿ ಅವರ ಉಪಕಾರವನ್ನೂ ಸ್ಮರಿಸುವೆನು.

ವರಲಿ, ಮುಂಬಯಿ 18.
ತಾ. 10—11—1953

ಇತೀ,

ರಮಾನಂದ ಅಮೀನ್.

# ಸೋಲು



ಒಂದು ರಜೆಯ ದಿನ. ರಮೇಶನು ಮುಂಬಯಿ-ಕೋಟೆಯೊಳಗಿನ 'ಕ್ರಾಸ್ ಮೈದಾನಿ'ನಲ್ಲಿ 'ಫೂಟ್ ಬಾಲ್' ಆಡುತ್ತಲಿದ್ದನು. ಆಟದಲ್ಲಿ ತಲ್ಲೀನನಾಗಿದ್ದುದರಿಂದ ಅವನ ಮನಸ್ಸಿನಲ್ಲಿ ಇನ್ನಿತರ ಯಾವದೇ ವಿಚಾರ ಹುಟ್ಟುವರೆ ಅವಕಾಶವಿರಲಿಲ್ಲ. ಆಡುತ್ತಾ ಆಡುತ್ತಾ ಮೈಬೆವರಿ ಒದ್ದೆಯಾಗಿ, ಕಾಲುಗಳು ಸೋಲುತ್ತಾ ಬಂದಾಗ ಸೂರ್ಯನೂ ಮುಳುಗಲು ಹೋಗುತ್ತಲಿದ್ದನು. ಮಬ್ಬು ಕವಿಯುತ್ತಾ ಬರುತ್ತಲಿತ್ತು. ಆಗ್ಗೆ ಚೆಂಡಾಟ ಮುಗಿಸಿಕೊಂಡು ಆಟಗಾರರೆಲ್ಲರೂ ಆಟದ ಕಳದಿಂದ ಒಬ್ಬೊಬ್ಬರೆ ಮೇಲೆ ಬಂದರು. ರಮೇಶನು 'ಫೂಟ್ ಬಾಲ್' ಆಡುವುದರಲ್ಲಿ ಬಲಹೀನನಾಗಿರುವುದರಿಂದ ಅವನು ಆಡುತ್ತಿದ್ದ ಪಂಗಡದವರು ಇಂದೂ ಅವನನ್ನು ತಮಾಷೆ ಮಾಡತೊಡಗಿದರು. ರಮೇಶನು ಮಾತ್ರ ಅವರಿಗೆ ಉತ್ತರವೀಯುತ್ತಿದ್ದಿಲ್ಲ. ತನ್ನಿಂದಾಗಿಯೇ ತಮ್ಮ ಪಂಗಡವು ಇಂದು ಕೂಡಾ ಆಟದಲ್ಲಿ ಸೋಲಬೇಕಾಯಿತೆಂಬುದನ್ನು ಅವನು ತಿಳಿದಿದ್ದನು. ಆಟದ ಕಳದಿಂದ ಮೇಲೆ ಬಂದು ಬಟ್ಟೆ ಬದಲಾಯಿಸುತ್ತಾ—ಗೆಳೆಯರ ಟೀಕೆಗೆ ಉತ್ತರ ಕೊಡದೆ ನಕ್ಕು ತಿರುಗಿ ನಿಂತವನು—ತಲೆಗೆ ರುಮಾಲು ಸುತ್ತಿದ್ದ, ಬಟ್ಟೆಯನ್ನು ಹಳಬರಂತೆ ತೊಟ್ಟಿದ್ದ, ಹಳೇಕಾಲದ ಕೋಟು ತೊಟ್ಟು ನಿಂತಿರುವ ಹೊಸ ವ್ಯಕ್ತಿಯನ್ನು ಕಂಡನು. ಆ ವ್ಯಕ್ತಿಯನ್ನು ಯಾರು ನೋಡಿದರೂ 'ಮುಂಬಯಿಗೆ ಹೊಸಬರಾಗಿರಬೇಕೆಂದು' ಹೇಳುವಂತಿತ್ತು. ಅಲ್ಲಿ ಸಮೀಪದಲ್ಲಿಯೇ ಇನ್ನೂ ಇಬ್ಬರು ನಿಂತಿದ್ದರು. ಅವರು 'ಯಾರು ಆಗಿರಬಹುದು' ಎಂಬುದಾಗಿ ನೋಡುತ್ತಾ ಮುಂದೆ ಬಂದ ರಮೇಶನು 'ತಂದೆ' ಎಂದೆಂದು ಹಾರಿಬಿದ್ದನು. ಆಗ ಅವನ ತಂದೆ ಸಂಕಣ್ಣನವರು ಆಶ್ಚರ್ಯ ಪಡುವ ಬದಲಿಗೆ ಮತ್ತಷ್ಟು ಗಂಭೀರವಾದರು. ರಮೇಶನೂ ಮುಂದೆ ಮಾತನಾಡದೆ ಮುಖ ಕಪ್ಪು ಮಾಡಿಕೊಂಡು ದೀರ್ಘ ಆಲೋಚನೆಗೆ ಗುರಿಯಾದನು. ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ಅಷ್ಟರಲ್ಲಿ ರಮೇಶನ ಜತೆಗಾರ ಆಟಗಾರರು ಅತಿಥಿಗಳನ್ನು ಸುತ್ತುಗಟ್ಟಿದರು. ಆಗಲೂ ರಮೇಶ ಬಾಯಿಬಿಟ್ಟು ಮಾತಾಡದಾದ. ಹೊತ್ತು ಮರೆಯಾಗಿ ಮಬ್ಬು ಕಪ್ಪೇರುತ್ತಲಿತ್ತು. ಆಗ ರಮೇಶನು,

"ನನ್ನೊಟ್ಟಿಗೆ ಬರುತ್ತೀರಾ? ಅಥವಾ ಬೇರೆ ಎಲ್ಲಿಯಾದರೂ ನಿಲ್ಲುವ ಏರ್ಪಾಡು ಮಾಡಿರುವಿರಾ?" ಎಂದು ಕೇಳಿದನು.

"ನಾನು ಎಲ್ಲಿಯಾದರೂ ನಿಲ್ಲುವ ಏರ್ಪಾಡು ಮಾಡುತ್ತಿದ್ದರೆ ಒಳಿತೆಂದು ನಿನ್ನ ಆಲೋಚನೆಯೋ?" ಎಂದು ಸಂಕಣ್ಣ ಅವನಿಗೆ ಮರುತ್ತರವಿತ್ತರು.

"ಹಾಗಲ್ಲ. ನನ್ನಲ್ಲಿಗೆಂದು ಬರುತ್ತಿದ್ದರೆ ಮೊದಲೇ ಬರೆದು ತಿಳಿಸಬಹುದಿತ್ತು. ಹಾಗೆ ತಿಳಿಸದೆ ಬಂದಿರುವುದರಿಂದ ಹೀಗೆ ಕೇಳ ಬೇಕಾಯಿತು" ಎಂದು ರಮೇಶ ಬಾಯಿ ಬಿಗಿದ.

"ನೀನು ಇಂಥಾ ಕಡೆ ಇದ್ದೀ ಎಂಬುದನ್ನು ಸ್ಪಷ್ಟವಾಗಿ ತಿಳಿಸುತ್ತಾ ಬಂದಿದ್ದರೆ, ನಾನು ಮುಂಬಯಿಗೆ ಬರುವುದನ್ನು ನೆಟ್ಟಗೆ ನಿನಗೇ ಬರೆಯುತ್ತಿದ್ದೆ. ನಿನಗೆ ನಿನ್ನ ಪತ್ರೆಯನ್ನು ತಿಳಿಸುವ ಅಗತ್ಯವಿರಲಿಲ್ಲ" ಎಂದಂದರು.

ಮಾತು ಬೆಳೆಸುತ್ತಾ ಅವರ ಗುಂಪು ಮುಂದೆ ಸಾಗಿತು. ಮೈದಾನಿನ ಕೊನೆ ಬರುತ್ತಲೆ ಗೆಳೆಯರಲ್ಲಿ ಹಲವರು ಅವರವರ ಮನೆಯ ದಾರಿ ಹಿಡಿದು ಹೋದರು. ಸಂಕಣ್ಣ ರಮೇಶನ ಜತೆ ನಡೆದರು. ಆಗ ಸಂಕಣ್ಣನ ಜತೆಗಾರರು, "ನಾಳೆ ಪೆಟ್ಟಿಗೆ ತಂದು ಅವನ ಬಿಡಾರಕ್ಕೆ ಮುಟ್ಟಿಸುವ ಏರ್ಪಾಡು ಮಾಡುತ್ತೇವೆ" ಎಂದಂದು ಅವರಿಂದ ನಿರೂಪ ತೆಗೆದುಕೊಂಡರು.

ಸಂಕಣ್ಣನವರಿಗೆ ಹೆಚ್ಚು ದಿನ ಮುಂಬಯಿಯಲ್ಲಿ ನಿಲ್ಲಲು ಅವಕಾಶವಿರಲಿಲ್ಲ. ರಮೇಶ ಒಂದು ಸಣ್ಣ ಆಫೀಸಿನಲ್ಲಿ ಐವತ್ತು ರೂಪಾಯಿ ಸಂಬಳಕ್ಕೆ ಗುಮಾಸ್ತ ಕೆಲಸ ಮಾಡುತ್ತಲಿದ್ದ. ಈ ಸಂಬಳದಿಂದ ತಿಂಗಳ ಖರ್ಚು ಕಳೆದು ಎಷ್ಟು ಉಳಿಸಬಲ್ಲನೆಂಬುದನ್ನು ಸಂಕಣ್ಣ ಗುಣಿಸಿಬಿಟ್ಟರು. ಮೇಲಧಿಕಾರಿಗಳು ಸೌಹಾರ್ದತೆಯಿಂದ ರಮೇಶನಿಗೆ ಸಂಬಳ ಹೆಚ್ಚಿಸಬೇಕಲ್ಲದೆ, ಅವನ ಚುರುಕುತನ ನೋಡಿ ಅಥವಾ ಅವನು ಕೆಲಸದ ಮೇಲಿಟ್ಟಿರುವ ನಂಬಿಗೆಯನ್ನು ನೋಡಿ ಸಂಬಳ ಹೆಚ್ಚಿಸುವಂತಿಲ್ಲ. ಅಂದರೆ ರಮೇಶ ಮೈಗಳ್ಳನೆಂದಲ್ಲ. ಬೇಕಾದರೆ ದಿನದಲ್ಲಿ ಒಂದು ನಿಮಿಷವನ್ನೂ ಹಾಳುಗೈಯದೆ ಕೆಲಸ ಮಾಡಬಲ್ಲನು. ಆದರೆ ತನ್ನ ಕೆಲಸವನ್ನು ಇನ್ನೊಬ್ಬರು ನೋಡಿ ಮೆಚ್ಚಬೇಕೆಂಬ ಆಕಾಂಕ್ಷೆ ಅವನಲ್ಲಿ ಇಲ್ಲವೇ ಇಲ್ಲ. ತಾನಾಯಿತು, ತನ್ನ ಕೆಲಸವಾಯಿತು. ಬೆಳೆದು ಮದುವೆ ಪ್ರಾಯಕ್ಕೆ ಬಂದರೂ ರಮೇಶನ ಹುಡುಗತನದ ಸ್ವಭಾವ

ಬದಲಾವಣೆಯಾಗದಿದ್ದುದನ್ನು ಕಂಡು ಸಂಕಣ್ಣನ ಮನಸ್ಸಿನಲ್ಲಿ ತುಂಬಾ ವಿಚಾರಗಳು ಹುಟ್ಟಲು ಅವಕಾಶ ಒದಗಿತು. ಇದೇ ಸಂಬಳಕ್ಕೆ ದುಡಿಯು ತ್ತಲಿದ್ದರೆ, ನಾಳೆ ಮದುವೆಯಾದ ಮೇಲೆ ಹೆಂಡತಿ ಮಕ್ಕಳಿಗೆ ಅನ್ನ ಕೊಡು ವುದು ಎಲ್ಲಿಂದ ಎಂಬ ವಿಚಾರವೂ ಅವರ ತಲೆಯನ್ನು ತಿನ್ನ ತೊಡಗಿತು. ಅವ ರಿಗೂ ಆರೇಳು ಮಕ್ಕಳುಗಳಿರುವರು. ಸಂಸಾರದ ಕಹಿಸಿಹಿಯನ್ನು ಚೆನ್ನಾಗಿ ಅನುಭವಿಸಿದ್ದಾರೆ. ಇನ್ನೂ ಸ್ವಲ್ಪ ದಿನ ತಡೆದು ರಮೇಶನ ಮುಂಬಯಿಯೊಳ ಗಿನ ಸಂಪೂರ್ಣ ಕಾರಭಾರವನ್ನು ನೋಡಬೇಕೆಂದು ಅವರಲ್ಲಿ ಕುತೂಹಲವಿತ್ತು. ಆದರೆ, ಅವರು ಮಂಗಳೂರಿನಲ್ಲಿ ವ್ಯಾಪಾರಸ್ಥರು ಮತ್ತು ಕಂಟ್ರಾಕ್ಟರಾಗಿ ದ್ದರು. ಆದುದರಿಂದ ಅವರಿಗೆ ಮುಂಬಯಿಯಲ್ಲಿ ಬಹಳದಿನ ತೆಪ್ಪನೆ ಕುಳಿತಿ ರಲು ಸಾಧ್ಯವಿರಲಿಲ್ಲ. ಅವರು ಅವರ ಪಾಲಿನ ಕೆಲಸವನ್ನು ಮಾಡದೆ ಹೋದರೆ ಕ್ರಮೇಣ ಅವರ ಏಜಂಟರಿಗೆ ಬೇರೆ ವ್ಯಾಪಾರಿಗಳನ್ನು ಹಿಡಿಯಲು ಅವಕಾಶ ಮಾಡಿ ಕೊಟ್ಟಂತಾಗುವುದು. ಈ ವಿಷಯವನ್ನೇ ಬಗೆದು ಅವರು ರಮೇಶ ನೊಡನೆ ಊರಿಗೆ ಹೋಗುವ ಪ್ರಸ್ತಾಪವೆತ್ತಿದರು. ಅದಕ್ಕೆ,

"ನಾನು ರಜೆಗೆ ಬರೆದು ನೋಡುತ್ತೇನೆ" ಎಂದು ಹೇಳಿದ ರಮೇಶ.

"ರಜೆ ಸಿಗುವುದಾದರೆ ತೆಗೆದುಕೋ. ಸಿಗದೆ ಹೋದರೆ ಚಿಂತಿಲ್ಲ. ಮುಂಬಯಿಯ ಗಳಿಕೆ ಸಾಕು ಇನ್ನು. ಈ ಹುಟ್ಟುವಳಿಯನ್ನು ದಕ್ಕಿಸಿಕೊಂಡು ಜೇಬನ್ನು ಬರಿದಾಗಿರಿಸುವುದಕ್ಕಿಂತ, ಊರಿನಲ್ಲಿ ಸಿಗಬಹುದಾದ ಪುಡಿಕಾಸನ್ನೇ ಒಟ್ಟು ಮಾಡುವುದೊಳಿತು."

ಎಂದಂದು ಕಣ್ಣರಳಿಸಿ ಮಗನನ್ನು ನೋಡತೊಡಗಿದರು. ಸ್ವಲ್ಪ ಹೊತ್ತು ರಮೇಶನು ಏನನ್ನೂ ಮಾತಾಡದೆ, ಮತ್ತೆ

"ರಜೆ ಸಿಗದೆ ಹೋದರೆ ರಾಜಿನಾಮೆ ಬರೆಯಬೇಕೇನು? ಈಗಿನ ದಿನಗಳಲ್ಲಿ ಮುಂಬಯಿಯೊಳಗೆ ನೌಕರಿ ಸಿಗುವುದೇ ಪ್ರಯಾಸ. ಇದ್ದುದನ್ನು ಬಿಟ್ಟು ಬಿಟ್ಟರೆ, ಮತ್ತೆ ಕಡಲೆ ತಿನ್ನಬೇಕಾದೀತು."

ಎಂದು ಮೆಲ್ಲನೆ ಉತ್ತರಿಸಿದನು.

"ಕಳೆದ ಮೂರುನಾಲ್ಕು ವರುಷಗಳಲ್ಲಿ ದುಡಿದು ಗಳಿಸಿಟ್ಟದ್ದು ಸಾಕಾಗಲಾರದೇನು? ಹೆತ್ತವಳಿಗೆ ಉಡಲು ಒಂದು ತುಂಡು ಬಟ್ಟೆ ತೆಗೆದುಕೊಡಲು ನಿನ್ನಿಂದಾಗಲಿಲ್ಲ. ಇನ್ನು ಮದುವೆಯಾ ದರೆ ಏನು ಮಾಡುವಿ? ಏನನ್ನು ತಿನ್ನುವಿ?"

"ಹಾಗೆಯೇ ಆಗುತ್ತದೆ. ಹೋದಷ್ಟು ದಿನಗಳು ಹೋಗುತ್ತವೆ. ಕೈಯಲ್ಲಿ ಕಾಸಿಲ್ಲವೆಂದು ಮನುಷ್ಯನು ಸಾಯಲಾಗುತ್ತದೋ? ನಾಲ್ಕು ದಿನ ಒಳಿತು, ನಾಲ್ಕು ದಿನ ಕೆಡುಕು. ಏರಿಳಿತ ಇರಲೇ ಬೇಕು. ಆದಕ್ಕೆ ಹೊಂದಿಕೊಂಡು ಬದುಕನ್ನು ನಿರ್ವಾಹವಿಲ್ಲದೆ ಸಾಗಿಸಬೇಕು" ಎಂದಂದ ರಮೇಶ.

"ಅದೆಲ್ಲ ಇರಲಿ. ನಿನ್ನ ಉಪದೇಶವನ್ನು ಕೇಳಲು ನಾನು ಬಂದಿರು ವುದಿಲ್ಲ. ರಜೆ ಸಿಗುವುದಾದರೆ ನೋಡು. ಇಲ್ಲದೆ ಹೋದರೆ ನನ್ನ ಜತೆಗೆ ನಡೆ. ನಿನ್ನನ್ನು ಊರಿಗೆ ಕರೆದು ಕೊಂಡುಹೋಗುವುದ ಕ್ಕಾಗಿಯೆ ಬಂದಿರುವೆನು. ತಿಳಿಯಿತೆ" ಎಂದು ಸಂಕಣ್ಣ ತುಸು ಕಠೋರವಾಗಿ ನುಡಿದರು. ಅದಕ್ಕೆ ರಮೇಶ ಉತ್ತರ ಕೊಡದಾದ. ಸ್ವಲ್ಪ ಹೊತ್ತಾದ ಮೇಲೆ, ಹೊರಗೆ ನೋಡುತ್ತಿದ್ದವನು ಒಮ್ಮೆಗೆ ಮುಖ ತಿರುಗಿಸಿ, ದಿಟ್ಟಿಸಿ, ಉಗುಳುನುಂಗಿ ಕೊಂಡು,

"ಕರೆದೊಯ್ಯುವುದು ಬೇಡ. ನಾನಾಗಿಯೆ ನಿಮ್ಮ ಜತೆ ಹೊರಟು ಬರುತ್ತೇನೆ. ನನ್ನ ನೌಕರಿಗೆ ಮಾತ್ರ ನೀರು ಬರು ವುದು ಖಂಡಿತ. ಮುಂಬಯಿಯಲ್ಲಿ ಗತ್ತು ಹೂಡಿ ಕಾಲ ಕಳೆಯಬೇಂದಿದ್ದೆ. ಕಣ್ಣಿಗೆ ಕಾಣಲಾರದ ಗುರಿಕಾಣಲು ನನ್ನಿಂದ ಸಾಧ್ಯವೆನಿಸದು. ನನ್ನನ್ನು ನೀವು ಊರಿಗೆ ಕರೆದೊಯ್ಯು ವುದಾದರೆ, ನನ್ನ ಮುಂದಿನ ಬದುಕಿನ ಬಗೆಗೆ ಆಲೋಚನೆ ಮಾಡಿ ರುವಿರಿ ಎಂದು ಕಾಣುತ್ತದೆ. ಹಾಗಿದ್ದರೆ ಒಳ್ಳೇದು. ನೀವು ಗೈದ ವಿಚಾರ, ಕಂಡ ತಿಳಿವು ನನ್ನ ಭಾವೀ ಜೀವನದ ಹಿತಕ್ಕಾದರೆ ಎಲ್ಲಿಯೂ ಇರುವುದಕ್ಕೆ ನನ್ನದೇನೂ ಅಡ್ಡಿಯಿಲ್ಲ. ಇದು ನಿಜ. ಹೆತ್ತವರ ಆಶ್ರಯದಲ್ಲಿ ಯಾವುದೊಂದು ವಿಚಾರದ ಗೊಡವೆಯಿ ಲ್ಲದೆ ಬೆಳೆಯುತ್ತಿರುವಾಗಿನ ಕಾಲಕ್ಕೂ ತಾನು ಗಳಿಸಿ ಉಣ್ಣುವಾ ಗಿನ ಕಾಲಕ್ಕೂ ಬಹಳ ವ್ಯತ್ಯಾಸವಿದೆಯೆಂಬುದು ನನಗೆ ಚೆನ್ನಾಗಿ ತಿಳಿಯುತ್ತದೆ. ಮನಸ್ಸು ಹಿಂಜರಿಯುತ್ತಿದೆಯಾದರೂ ನಾನು ನಿಮ್ಮ ಜತೆ ಬರುವೆನು. ನೀವು ನನ್ನನ್ನು ಬಿಟ್ಟು ಹೋಗುವುದಿಲ್ಲ ಎಂಬುದನ್ನು ನಿಮ್ಮ ಮುಖವು ಹೇಳುತ್ತಲಿದೆ. ಅದಕ್ಕಾಗಿ ಮುಂದಕ್ಕೆ ಮಾತನಾಡಲು ನಿಮಗೆ ಎಡೆಗೊಡುವುದಿಲ್ಲ. ನೀವು

ನನ್ನನ್ನು ಕರೆದೊಯ್ಯುವುದು ಒಳ್ಳೆದಾಗುವುದೋ ಕೆಟ್ಟದಾಗುವುದೋ ಎಂಬುದೆನ್ನಲು ನಾನು ಸಿದ್ಧನಿಲ್ಲ. ಆದರೆ ನನ್ನನ್ನು ನೀವು ಹೀಗೆಯೇ ಇನ್ನೂ ಸ್ವಲ್ಪ ಸಮಯ ದೂರವಿಟ್ಟದ್ದರೆ, ನನ್ನಲ್ಲಿ ಇನ್ನೂ ಸ್ವಲ್ಪ ತಿಳುವಳಿಕೆ ಹೆಚ್ಚುವಂತಾಗುತ್ತಿತ್ತು. ಜವಾಬ್ದಾರಿಕೆಯೇನೆಂದು ಮನವರಿಕೆಯಾಗಬಹುದಿತ್ತು. ನನ್ನ ಬದುಕಿನಲ್ಲಿಯೂ ಪರಿವರ್ತನೆಯಾಗಬಹುದಿತ್ತು. ಅದಕ್ಕೆ ಇನ್ನು ಎಡೆಯಿಲ್ಲ. ನಾನು ನಿಮ್ಮ ಜತೆಗೆ ಹೊರಡುತ್ತೇನೆ……"

ಎಂದು ಸಾವಧಾನದಿಂದ ಹೇಳಿ ಮುಗಿಸಿ ಹೊರಗೆ ಹೊರಟು ಹೋದನು. ಸಂಕಣ್ಣ ಅವನ ಮಾತನ್ನು ಕೇಳಿ ಮೌನತಾಳಿದರು. ಅವರೇನೋ ಈ ಮೊದಲೆ ಅವನನ್ನು ಊರಿಗೆ ಕರೆದುಕೊಂಡು ಹೋಗುವುದು ನಿಶ್ಚಯಿಸಿ ಬಿಟ್ಟಿದ್ದಾರೆ. ತನ್ನ ನಿರ್ಧಾರವನ್ನು ಇದ್ದಕ್ಕಿದ್ದಂತೆ ಬದಲಾಯಿಸಲು ಅವರ ಮನಸ್ಸು ಒಡಂಬಡಲಿಲ್ಲ. ರಮೇಶನು ನಾಲ್ಕು ವರುಷಗಳ ಮೊದಲು ಇದ್ದಂತೆ ಈಗ ಇರದೆ ಹಲವು ಮಟ್ಟಿಗೆ ಬದಲಾಗಿರುವನೆಂಬುದು ಮಾತ್ರ ಅವರಿಗೆ ಖಾತ್ರಿಯಾಯಿತು. ಇನ್ನು ಮುಂದೆ ಅವನ ಜತೆ ಮಾತು ಬೆಳೆಸುವಾಗಲೂ ತುಸು ಜಾಗ್ರತೆಯಿಂದಿರಬೇಕೆಂದು ಊಹಿಸುವಂತಾದರು.

ಇದಾಗಿ ನಾಲ್ಕು ದಿನಗಳೂ ಅವರು ಮುಂಬಯಿಯಲ್ಲಿ ನಿಲ್ಲಲಿಲ್ಲ. ರಮೇಶನು ಊರಿಗೆ ಹೋಗಲಿರುವುದನ್ನು ಕೇಳಿ ಬಹಳ ಮಂದಿ ಗೆಳೆಯರು ಮಾತಾಡಲು ಬಂದಿದ್ದರು. ಎಷ್ಟೋ ಸಂದರ್ಭಗಳಲ್ಲಿ ಇದೇ ಗೆಳೆಯರು ಅವನನ್ನು ಚುಚ್ಚಿ ಮಾತಾಡಿದ್ದುಂಟು. ತಮಾಷೆಗೈದು ಹೀಯಾಳಿಸಿದ್ದುಂಟು. ರಮೇಶನು ಮಾತ್ರ ತಾನಾಗಿ ಏನನ್ನಾದರೂ ಮಾಡುವ ಸ್ವಭಾವದವನಾಗಿರಲಿಲ್ಲ. ಗೆಳೆಯರಲ್ಲಿ ಹೆಚ್ಚಿನವರು ಇಂದಿನವರೆಗೆ ಅವನನ್ನು ತಮಗಿಂತ ಆಟಕೂಟದಲ್ಲಿ ಕಡಮೆ ವರ್ಗದವನೆಂದು ತಿಳಿಯುತ್ತಿದ್ದರು. ಅವರೇ ಈಗ ಅವನ ಎದುರಿಗೆ ಮುಗ್ಧರಾಗಿ ನಿಂತುಕೊಂಡು ತಮ್ಮ ಎದೆಯೊಳಗಿನ ಮರುಕವನ್ನು ಹೊರಗೆಡಹತೊಡಗಿದರು. ಆದರೂ ರಮೇಶನು ಅದೇ ಪ್ರೀತಿವಾತ್ಸಲ್ಯದಿಂದ ಗೆಳೆಯರನ್ನು ಬಿಟ್ಟು ನಗುತ್ತಾ ಊರಿಗೆ ಹೊರಟನು.

* * * * *

ಮಂಗಳೂರು ನಗರದ ಬಂದರದ ಬದಿಯಲ್ಲಿರುವ ಗೂಡ್ಸ ಶೆಡ್ಡಿನ ಕೆಳವೈಲಯಲ್ಲಿಯೇ ಸಂಕಣ್ಣನ ಮನೆಯಿರುವುದು. ಮನೆ ಅಷ್ಟೇನು ದೊಡ್ಡದಲ್ಲ

ದಿದ್ದರೂ ಸಣ್ಣದೆಂದೂ ಹೇಳಲಾಗದು. ಚೊಕ್ಕವಾಗಿದೆ. ಅವರ ಸಂಸಾರ ಸುಖಮಯವಾಗಿದೆ. ಕಾರಣ, ಅವರ ಮನೆಯಲ್ಲಿರುವವರೆಲ್ಲರೂ ಮೈಬಿಟ್ಟು ದುಡಿಯುವವರು. ಸಂಕಣ್ಣನ ಕೈಗೆ ಹಿರಿಯರು ಮಾಡಿರುವ ಆಸ್ತಿಪಾಸ್ತಿಗಳೇನು ಬಂದಿರಲಿಲ್ಲ. ಅವರು ಹುಟ್ಟಿ ಬೆಳೆದುದು ಕಾಪಿನಲ್ಲಿಯಾದರೂ ಈಗ ಮಂಗಳೂರಿನ ನಾಗರಿಕರಾಗಿದ್ದಾರೆ. ಮುಖ್ಯ ನಗರದಿಂದ ದೂರವಿರುವ ಗ್ರಾಮಗಳ ದವಸಧಾನ್ಯ ಮತ್ತು ಜೀನಸು ಮೊದಲಾದ ಸಾಮಾನುಗಳನ್ನು ಪೇಟೆಗೆ ತಂದು ಮಾರುವುದಿದ್ದರೆ, ಅವನ್ನು ಹೆಚ್ಚಾಗಿ ಜೋಡೆತ್ತಿನ ಗಾಡಿಗಳಲ್ಲಿ ತುಂಬಿಸಿಕೊಂಡು ಬರುವುದು ವಾಡಿಕೆ. ನದೀ ಹರಿಯುವ ಪ್ರದೇಶವಾಗಿದ್ದರೆ ದೋಣಿಯ ಮುಖಾಂತರ ಸಾಗಿಸಲಾಗುವುದು. ಹುಡುಗತನದಲ್ಲಿ ಸಂಕಣ್ಣನಿಗೆ ಸಂಕು ಎಂದು ಕರೆಯಲ್ಪಡುತ್ತಿದ್ದಾಗ ಈ ಗಾಡಿ ಹೊಡೆಯುವವರ ಸಂಪರ್ಕ ಬೆಳೆದಿತ್ತು. ಹೀಗಾಗಿ ಮನೆಯಲ್ಲಿದ್ದು ಬೇಸಾಯ ಮೊದಲಾದ ಕೆಲಸವನ್ನು ಮಾಡುವುದಕ್ಕಿಂತ ಹೀಗೆ ಗಾಡಿ ಆಳುಗಳ ಒಟ್ಟಿಗೆ ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗುವುದನ್ನು ಮೆಚ್ಚಿದ್ದನು. ಮನೆಯ ಕೆಲಸಕ್ಕೆ ತಪ್ಪಿಸುತ್ತಿದ್ದುದರಿಂದ ಯಾವಾಗಲೂ ಮನೆಯ ಯಜಮಾನರ ಕೋಪಕ್ಕೆ ಗುರಿಯಾಗುತ್ತಿದ್ದುದುಂಟು. ಆದರೆ ಒಮ್ಮೆ ಮಂಗಳೂರಿಗೆ ಬಂದು ಪಟ್ಟಣದ ಸೊಬಗನ್ನು ಕಂಡನಂತರ ತಾರುಣ್ಯದ ಚಂಚಲ ಮನಸ್ಸು ಹಳ್ಳಿಯಲ್ಲಿ ನೆಲೆನಿಲ್ಲುವುದಕ್ಕೆ ಎಡೆಗೊಡುತ್ತಿದ್ದಿಲ್ಲ. ಹೀಗೆ ಕೆಲವು ಸಮಯ ಕಳೆಯಲು ಸಂಕಣ್ಣನ ಅಣ್ಣನಿಗೆ ಮದುವೆಯಾಗುವಾಗ್ಗೆ ಮನೆಯವರು ದೀರ್ಘ ಆಲೋಚನೆ ಮಾಡಿ, ಸಂಕಣ್ಣನಿಗೂ ಮದುವೆ ಮಾಡಿದರೆ ಕ್ರಮೇಣ ಬುದ್ಧಿ ಬದಲಾಗಬಹುದೆಂಬ ಭಾವನೆಯಿಂದ ಸಂಕಣ್ಣನ ಮದುವೆಯನ್ನೂ ಮಾಡಿಬಿಟ್ಟರು. ಇದರಿಂದಾಗಿ ಸಂಕಣ್ಣನ ಮೇಲೆ ಕೆಲವು ರೀತಿಯ ಪರಿಣಾಮವಾಗುವಂತಾಯಿತು. ಆದರೆ ಮನೆಯವರ ವಿಚಾರ ಬದಲಾಗಲಿಲ್ಲ. ಒಮ್ಮೆ ಮನೆಯವರ ದೃಷ್ಟಿಯಲ್ಲಿ ಮೈಗಳ್ಳನಾಗಿ ನಿಂದಿಸಲ್ಪಟ್ಟವನು ಈಗಲೂ ಅದೇ ದೃಷ್ಟಿಯಿಂದ ನೋಡಲ್ಪಡುತ್ತಿದ್ದ. ಇದನ್ನು ಸಂಕಣ್ಣನ ಹೆಂಡತಿ ಸೀತಕ್ಕನಿಗೆ ನೋಡಿ ಸಹಿಸಿಕೊಳ್ಳಲಾಗಲಿಲ್ಲ. ಅವಳು ಹಳ್ಳಿಯ ಹೆಣ್ಣಾಗಿದ್ದರೂ ಪತಿ ಭಕ್ತಿಯನ್ನು ತುಂಬಾ ತಿಳಿದಿದ್ದಳು. ಗಂಡನನ್ನು ಪ್ರೀತಿಸುವುದು ಹೆಂಡತಿಯ ಧರ್ಮವೆಂದು ಅರಿತು ಆದಕ್ಕಾಗಿ, ಅವನ ಮೇಲಾಗುವ ತುಚ್ಛೀಕಾರವನ್ನು ತಪ್ಪಿಸುವುದಕ್ಕಾಗಿ ಮನೆಯೊಳಗೆ ಹೆಚ್ಚುಹೆಚ್ಚಾಗಿ ದುಡಿಯ ತೊಡಗಿದಳು. ಆದರೆ ಪರಿಸ್ಥಿತಿ ಮಾತ್ರ

'ನಾಯಿಯ ಬಾಲ ನೆಟ್ಟಗಾಗಲಿಲ್ಲ' ವೆಂಬಂತಾಯಿತು. ಸೀತಕ್ಕ ಬಸುರಿಯಾದಳು. ಮೊದಲ ಬಸುರಿಗೆ ನಡೆಯಬೇಕಾಗಿದ್ದ ಸೀಮಂತದ ಜವಾಬ್ದಾರಿಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಸಂಕಣ್ಣ ದೂರದೂರಾದ. ಸೀತಕ್ಕ ಕಣ್ಣೀರು ಸುರಿಸಿ ಹೆಣ್ಣಿನ ಬಾಳನ್ನು ಹಳಿದುಕೊಂಡಳು. ಸಂಕಣ್ಣ ಮತ್ತೊಮ್ಮೆ ಮಂಗಳೂರಿಗೆ ಹೋದವನು ಅಲ್ಲಿಯೇ ತಳವೂರಿದನು.

ಮಂಗಳೂರಿಗೆ ಬಂದು ಕೆಲವು ದಿನಗಳಾದಾಗ ಸಂಕಣ್ಣನ ವಿಚಾರ ಬದಲಾಯಿತು. ತಾನು ದುಡಿದು ತನ್ನ ಕಾಲ ಮೇಲೆ ನಿಲ್ಲುವುದು ಎಷ್ಟು ಕಷ್ಟದಾಯಕವಾದುದೆಂಬುದು ತಿಳಿದು ಬರುವಂತಾಯಿತು. ಸರಕುಗಳನ್ನು ತುಂಬಿಕೊಂಡು ಬರುವ ಎತ್ತುಗಾಡಿಗಳು ಹೆಚ್ಚಾಗಿ ಬಂದರದಲ್ಲಿಯೇ ನಿಲ್ಲುತ್ತವೆ. ಹಿಂತಿರುಗಿ ಹೋಗುವಾಗ್ಗೆ ಬೇರೆ ಏನಾದರೂ ಸರಕು ಸಿಗಬಹುದೇ ಎಂಬ ಆಶೆಯೇ ಇದಕ್ಕೆ ಕಾರಣ. ಅಲ್ಲಿಗೆ ಯಾವಾಗಲೂ ಸಂಕಣ್ಣ ಬಂದು ಹೋಗುತ್ತಿದ್ದುದರಿಂದ ಮಂಗಳೂರು ಬಂದರ ಮತ್ತು ಹೆಚ್ಚಾಗಿ ಅಲ್ಲಿಯ ಕೂಲಿಯಾಳುಗಳ ಪರಿಚಯ ಚೆನ್ನಾಗಿ ಆಗಿತ್ತು. ಇದರಿಂದಾಗಿ ಸಂಕಣ್ಣ ಬಂದರದಲ್ಲಿಯೇ ನಿಲ್ಲುವವನಾದ. ಕೆಲಸ ಕೂಲಿಯದ್ದು. ಊಟ ಹೋಟಲಿನಲ್ಲಿ. ಮಲಗುವುದು ಅಂಗಡಿ ಜಗಲಿಯಲ್ಲಿ. ಹೀಗೆಯೇ ಕೆಲವು ಸಮಯವನ್ನು ಕಳೆದನು. ಮಳೆಗಾಲ ಆರಂಭವಾಗಲು ಹಡಗ ಸಂಚಾರ ನಿಂತುಹೋಯಿತು. ಮಂಜಿ ಪತ್ತೆಮಾರುಗಳನ್ನು ದಡಕ್ಕೆ ಎಳೆದು ಮಳೆಯಿಂದ ಒದ್ದೆಯಾಗದಂತೆ ಪುರೆಕಟ್ಟಿದರು. ಬಂದರದಲ್ಲಿ ವ್ಯಾಪಾರ ವಹಿವಾಟು ಕಡಮೆಯಾಗುತ್ತಾ ಬಂತು. ಸಂಕಣ್ಣನಿಗೆ ಈಗ ಕೂಲಿ ಸರಿಯಾಗಿ ಸಿಗದೆ ಹೊಟ್ಟೆಯ ಪ್ರಶ್ನೆ ದೊಡ್ಡದೆನಿಸತೊಡಗಿತು. ಏನು ಮಾಡುವುದೆಂದು ತಿಳಿಯಲಿಲ್ಲ. ಯಾವ ವಿಚಾರವೂ ಹೊಳೆಯಲಿಲ್ಲ. ಬಂದ ದಾರಿಗೆ ಸುಂಕವಿಲ್ಲವೆಂಬಂತೆ ಮೆಲ್ಲನೆ ಮನೆಯ ಕಡೆಗೆ ಹಿಂತಿರುಗುವವನಾದ. ಆಗ್ಗೆ ಮನೆಯ ಯಜಮಾನರು ಅವನಿಗೆ ಹೇಳುವುದನ್ನೆಲ್ಲ ಹೇಳಿದರು. ಅದರ ಜೊತೆಗೆ ಹೇಳಬಾರದಂತಹ ಮಾತುಗಳನ್ನೂ ಹೇಳಿದರು. ಬೇಸಾಯದ ಕಾಲವಾದ್ದರಿಂದ ಸಂಕಣ್ಣ ಮೆಲ್ಲನೆ ಮನೆಗೆಲಸದಲ್ಲಿ ಸೇರಿಹೋಗುವವನಾದ. ಅವನಿಂದ ಈಗ ಸೀತಕ್ಕನ ಮುಖ ನೋಡುವುದಾಗಲಿಲ್ಲ. ಬಸುರಿಗೆ ಸೀಮಂತ ಮಾಡದೆ ಅವನು ಓಡಿ ಹೋಗಿದ್ದ. ಈಗ ಅದೇ ಹೆಣ್ಣಿನ ಮೈಮೇಲೆ ಅವನು ಅಧಿಕಾರ ಕೇಳಲಿದ್ದಾನೆ. ಅಧಿಕಾರ ಕೇಳುವ ಸಂದರ್ಭವೂ ಬಂತು. ಆಗಲೂ ಸೀತಕ್ಕ ಅವನನ್ನು ಪ್ರತಿಭಟಿಸಲಿಲ್ಲ.

ಹೆಣ್ಣಿನ ಧರ್ಮಕ್ಕೆ ಅನುಸಾರವಾಗಿ, "ನಾನು ಹೋಗ ಬೇಡಿರೆಂದು ಹೇಳಿದರೆ, ನೀವು ಎಲ್ಲಿಗಾದರೂ ಹೋಗುವುದನ್ನು ಬಿಡುವುದಿಲ್ಲ. ಇನ್ನೂ ಬೇಕಾದರೆ ನಿಮಗೆ ಇಚ್ಛೆಯಾದಲ್ಲಿಗೆ ಹೋಗಿರಿ. ಆದರೆ ಹೋಗುವಾಗ್ಗೆ ಮಾತ್ರ ನನ್ನನ್ನು ಮರೆಯಬೇಡಿರಿ" ಎಂದು ಪ್ರಾರ್ಥಿಸಿಕೊಂಡಳು. ಅವಳ ಪ್ರಾರ್ಥನೆಯ ಫಲಿತಾಂಶ ಏನಾಯಿತೋ ಎಂದೆನ್ನ ಬರುವುದಿಲ್ಲ. ಮಳೆಗಾಲ ಮುಗಿಯುತ್ತಾ ಬಂದು ಗಾಡಿಗಳಲ್ಲಿ ಸಾಮಾನು ತುಂಬಿ ಮಂಗಳೂರಿನ ಬಂದರಕ್ಕೆ ಕೊಂಡು ಹೋಗುವ ಸಮಯದಲ್ಲಿ ಸಂಕಣ್ಣನೂ ಹೊರಟು ಬಂದನು.

ಆರಂಭದಲ್ಲಿ ಅವನು ಈ ಮೊದಲಿನ ಕೆಲಸದಲ್ಲಿಯೇ ಸೇರಿ ಕೊಂಡರೂ ಅವನಿಗೆ ಒಂದು ಹೊಸ ಅನುಭವ ಬರುವಂತಾಯಿತು. ಕೆಲವರ ಮುಖಂಡತ್ವದಿಂದ ಬಂದರದಲ್ಲಿ ಒಮ್ಮೆ ಬಿಡದೆ ಎರಡು ದಿನ ಬಯಲಾಟ ಆಡಿಸುವ ಏರ್ಪಾಡಾಯಿತು. ಹೆಚ್ಚು ಕಡಮೆ ಪ್ರತಿಯೊಬ್ಬ ಕೂಲಿಯೂ ತನ್ನ ಶಕ್ತ್ಯಾನುಸಾರ ಅಂದಿನ ಆಟಕ್ಕಾಗಿ ಹಣ ಜಮೆ ಕೊಟ್ಟದ್ದನು. ಬಯಲಾಟದ ರಾತ್ರಿಯಲ್ಲಿ ಸುತ್ತಲೂ ಸಂತೆ ನೆರೆಯುವುದು ಇದ್ದೇ ಇದೆ. ಬಂದರದಲ್ಲಿರುವ ಈ ಕೆಲವು ಕೂಲಿಗೆಳೆಯರು ಒಟ್ಟಾಗಿ ಅಂದು ಒಂದು ಸಂತೆ (ಅಂಗಡಿ) ಇಡುವುದೆಂದು ನಿರ್ಧರಿಸಿದರು. ಇದಕ್ಕಾಗಿ ತಮ್ಮಲ್ಲಿದ್ದ ಹಣಕಾಸನ್ನು ಒಟ್ಟು ಮಾಡಿದರು. ಅದು ಸಾಕಾಗದುದಕ್ಕೆ ಸ್ವಲ್ಪ ಹಣವನ್ನು ಬೇರೆ ಗೆಳೆಯರಿಂದ ಸಾಲ ಹಿಡಿಯುವಂತಾದರು. 'ಸೇಡಿಗುಡ್ಡೆ'ಗೆ ಹೋಗಿ ಕೆಲವು ಗೊನೆ ಬಾಳೆಹಣ್ಣುಗಳನ್ನೂ ಕೆಲವು ನೂರು ಅಡಿಕೆಗಳನ್ನೂ ಕೆಲವೂ ಸೂಡಿ ವೀಳ್ಯದೆಲೆಯನ್ನೂ ತರುವಂತಾದರು. ಅದಕ್ಕೆ ಕೆಲವು ಸಾವಿರ ಬೀಡಿಗಳನ್ನು ಸೇರಿಸಿ ಸಂತೆ ಮಾಡಿದರು. ಎರಡು ರಾತ್ರಿಗಳಲ್ಲಿಯೂ ಸ್ವಲ್ಪವೂ ನಿದ್ದೆಮಾಡದೆ ಸಂತೆ ನಡೆಸಿದುದರಿಂದ ವ್ಯಾಪಾರ ಚೆನ್ನಾಗಿ ನಡೆಯಿತು. ಅವರ ಕೂಲಿಗೆಳೆಯರೆಲ್ಲ ಅದೇ ಅಂಗಡಿಗೆ ಬಂದು ವ್ಯಾಪಾರಮಾಡಿದುದರಿಂದ ಸಂತೆ ಬಿಗುವಾಯಿತು. ಮಾರಾಟಕ್ಕೆ ತಂದಿದ್ದ ಸಾಮಾನುಗಳೆಲ್ಲ ಮಾರಿ ಹೋಗಬಹುದೋ ಎಂದಿದ್ದ ಸಂಶಯ ಮೊದಲಿನ ದಿನದ ವ್ಯಾಪಾರದಲ್ಲಿಯೆ ಮುಕ್ಕಾಲು ಅಂಶ ಸಾಮಾನುಗಳು ಮಾರಿ ಹೋದುದರಿಂದ ದೂರವಾಗಿತ್ತು. ಮರುದಿನಕ್ಕಾಗಿ ಮತ್ತೊಮ್ಮೆ ಸೇಡಿಗುಡ್ಡೆಗೆ ಹೋಗಿ ಸಾಮಾನು ತರಬೇಕಾಯಿತು. ಬಯಲಾಟ ಮುಗಿದಾದ ಮೇಲೆ ಸಂತೆ ಬಿಚ್ಚುವಾಗ್ಗೆ, ವ್ಯಾಪಾರದಲ್ಲಿ ಬಂದ ಲಾಭವನ್ನು ನೋಡಿ, ಲೆಕ್ಕಮಾಡಿ ಗೆಳೆಯರೆಲ್ಲರೂ ಅವಾಕ್ಕಾದರು. ವ್ಯಾಪಾರದಲ್ಲಿ ಸಾಧನೆ ಮಾಡಿದವರಿಗೆ

ಇಂತಿಷ್ಟೇ ಲಾಭ ಸಿಗುತ್ತದೆಂಬ ತಿಳುವಳಿಕೆ ಅವರೆಲ್ಲರಲ್ಲಿಯೂ ಮೂಡಿ ಮುಖ ಮುಖ ನೋಡಿದರು. ಬೇರೆ ಗೆಳೆಯರಿಂದ ಸಾಲ ತಂದಿದ್ದ ಹಣವನ್ನು ವಾಪಾಸು ಕೊಟ್ಟು ತಮ್ಮ ತುಂಬಿಸಿದ್ದ ಹಣವನ್ನು ತೆಗೆದು ಕೊಂಡು ಬಾಕಿ ಉಳಿದ ಲಾಭದ ಹಣವನ್ನು ಅವರವರೊಳಗೆ ಹಂಚಿಕೊಂಡರು. ಇನ್ನು ಉಳಿದದ್ದು ಕೆಲವು ಬಾಳೆಗೊನೆ, ವೀಳ್ಯದೆಲೆ, ಅಡಿಕೆ ಮೊದಲಾದುವುಗಳು. ಅದನ್ನೆಲ್ಲವನ್ನು ಯಾವುದೊಂದು ಅಂಗಡಿಯವರಿಗೆ ಮಾರಿ ಬಿಡುವುದೆಂದು ಆಲೋಚಿಸುತ್ತಿದ್ದಾಗ ಸಂಕಣ್ಣ ಮುಂದೆ ಬಂದು, "ಅದನ್ನೆಲ್ಲ ನನಗೆ ಕೊಡಿರಿ. ಅಂಗಡಿಯವರು ಕೊಡುವುದನ್ನು ನಾನೇ ಕೊಡುತ್ತೇನೆ" ಎಂದಂದನು. ಗೆಳೆಯರು ಅವನ ಮಾತಿನಿಂದ ನಗುವಂತಾದರು. ಆದರೆ ಸಂಕಣ್ಣನ ಮುಖ ಲಕ್ಷಣ ಗೆಳೆಯರ ಚೇಷ್ಟೆಗೆ ಬದಲಾಗಲಿಲ್ಲ. ಅವನ ವಿಚಾರ ಗುರಿ ಕಂಡಿತ್ತು. ಮುಖ ಗಂಭೀರ ವಾಗಿತ್ತು. ಗೆಳೆಯರು ಸ್ವಲ್ಪ ಹಿಂದೆ ಮುಂದೆ ಆಲೋಚನೆ ಮಾಡಿ, ಸಂಕಣ್ಣ ಈ ಸಂತೆಯ ಸಲುವಾಗಿ ಇನ್ನಿತರರಿಗಿಂತ ಹೆಚ್ಚಾಗಿ ಮೈಮುರಿದು ದುಡಿದುದರಿಂದ ಹೆಚ್ಚಿಗೆ ಉಳಿದಿದ್ದ ಆ ಬಾಳೆಗೊನೆ, ವೀಳ್ಯೆ, ಅಡಿಕೆ, ಬೀಡಿಗಳನ್ನೆಲ್ಲ ಅವನಿಗೇ ಬಿಟ್ಟು ಕೊಟ್ಟರು.

ಆಗ್ಗೆ ಗೆಳೆಯರಲ್ಲಿ ಒಬ್ಬನು ನಗುತ್ತಾ, "ಸಂಕಣ್ಣ, ಮೇಳದವರು ಪಣಂ ಬೂರಿಗೆ ಹೊರಟಿದ್ದಾರೆ. ನಿನ್ನ ಸಂತೆಯನ್ನು ಅಲ್ಲಿಗೂ ಕೊಂಡು ಹೋಗು" ಎಂದು ತಮಾಷೆಗೈದ. ಆಗಲೂ ಸಂಕಣ್ಣನ ಮುಖ ಲಕ್ಷಣ ಬದಲಾಗಲಿಲ್ಲ. ಕೈಯಲ್ಲಿ ತೆಕ್ಕೊಂಡ ಈ ಹೊರೆಯನ್ನು ಹೇಗೆ ಹೊರುವುದೆಂಬ ವಿಚಾರ ಅವನ ಕಣ್ಣಲ್ಲಿ ಹೊರಸೂಸುತ್ತಲಿತ್ತು. ಇದಾದ ಮರುದಿನ ಸಂಕಣ್ಣ ಬಂದರಿನಲ್ಲಿಯೇ ಒಂದು ಅಂಗಡಿ ಬಾಡಿಗೆಗೆ ಹಿಡಿದು ತನ್ನ ಬೀಡಾ, ಬೀಡಿ, ಸೋಡಾ, ಸಿಗರೇಟಿನ ವ್ಯಾಪಾರ ಬೆಳೆಸತೊಡಗಿದ. ದಿನ ಹೋದಂತೆ ವ್ಯಾಪಾರ ಬೆಳೆಯ ತೊಡಗಿತು. ಕೂಲಿ ಕೆಲಸ ಮಾಡುವ ವಿಚಾರ ತನ್ನಷ್ಟಕ್ಕೆ ತೊಲಗಿ ಹೋಯಿತು· ಬಂದರಿ ನಲ್ಲಿ ಕೂಲಿಯಾಗಿದ್ದವನು ಅಂಗಡಿ ಸಂಕಣ್ಣನಾದ.

ಈ ರೀತಿ ತನ್ನ ಕಾಲು ಗಟ್ಟಿಯಾಗುತ್ತಾ ಬರಲು ಹೆಂಡತಿಯ ನೆನಪು ಆಗ ತೊಡಗಿತು. ಅಂಗಡಿಗೆ ಬೇಕಾಗುವ ಸಾಮಾನು ತರಲು ಪೇಡಿಗುಡ್ಡೆಗೆ ಹೋಗು ವಾಗ್ಗೆ ಅಂಗಡಿಯನ್ನು ಮುಚ್ಚಿ ಹೋಗಬೇಕಾಗುತ್ತದೆ. ಹೋಟೆಲಿಗೆ ಊಟಕ್ಕೆ ಹೋಗುವಾಗ್ಗೆ ಗೆಳೆಯರಲ್ಲಿ ಯಾರನ್ನಾದರೂ ಕರೆದು ಹತ್ತು ನಿಮಿಷ ಅಂಗಡಿ ಯನ್ನು ನೋಡಿಕೊಳ್ಳಲು ಹೇಳಬೇಕಾಗುತ್ತದೆ. ಈ ಮಧ್ಯೆ ಎಷ್ಟೋ ಸಂದರ್ಭ

ಗಳಲ್ಲಿ ಸಮಯದ ಅನಾನುಕೂಲತೆಯಿಂದಾಗಿ ಊಟ ತಪ್ಪಿದ್ದುಂಟು. ಇಷ್ಟರಲ್ಲಿ ಮಳೆಗಾಲ ಆರಂಭವಾಗಲಿಕ್ಕಾಯಿತು. ಮಂಜಿ ಪತ್ರೆಮಾರುಗಳು ಹಾಯಿ ಇಳಿಸಿ ದಡ ಸೇರುತ್ತಲಿತ್ತು. ಸಂಕಣ್ಣ ಒಂದು ದಿನ ನೆಟ್ಟಗೆ ತನ್ನ ಹುಟ್ಟೂರಿಗೆ ನಡೆದನು. ಆಗ್ಗೆ ಮನೆಯವರು ಸಂಕಣ್ಣನ ಮೇಲೆ ಬಹಳ ಕೋಪದಿಂದಿರು ವಂತೆ ಕಾಣುತ್ತಿದ್ದಿತು. ಮಳೆಗಾಲ ಆರಂಭವಾಗಿ ಕೂಲಿ ಕೆಲಸ ಕಡಿಮೆ ಯಾದಾಗ ಸಂಕಣ್ಣ ಹಿಂತಿರುಗಿ ಬರುತ್ತಾನೆಂದು ಅವರಿಗೆ ಮೊದಲೇ ಗೊತ್ತಿತ್ತು! ಆದರೆ ಇಂದು ಸಂಕಣ್ಣ ಅಂಜುತ್ತಂಜುತ್ತಾ ಬರಲಿಲ್ಲ. ಮೀಸೆಹೊತ್ತ ಗಂಡಸಿ ನಂತೆ ಬಿಗುವಿನಿಂದ ಬರುವವನಾದ. ಅವನ ಬಿಗುವನ್ನು ನೋಡಿ ಮನೆಯ ವರು ದಂಗುಬಡೆದಂತಾಗದಿದ್ದರೂ ತುಸು ಚಕಿತರಾಗದಿರಲಿಲ್ಲ. ಮಧ್ಯಾಹ್ನದ ಊಟ ಮುಗಿಸಿಕೊಂಡು ಕುಳಿತಿದ್ದಾಗ್ಗೆ, "ನಾನು ಸೀತುವನ್ನು ಕರೆದುಕೊಂಡು ಹೋಗುತ್ತೇನೆ"ಎಂಬುದಾಗಿ ಸಂಕಣ್ಣ ಮನೆ ಯಜಮಾನನಲ್ಲಿ ಹೇಳಿದ. ಆ ಮಾತಿಗೆ ಯಜಮಾನನಿಂದ ಸಂಕಣ್ಣನಿಗೆ ತಕ್ಷಣ ಏನೊಂದು ಉತ್ತರ ಸಿಗದೆ ಹೋದರೂ ಕಡೆಗೆ, "ನಿನಗೆ ಮದುವೆ ಮಾಡಿದೆವು. ಆವಳಿಗೆ ಬಯಕೆ (ಸೀಮಂತ) ಮಾಡಿ ದೆವು. ಈಗ ಅನ್ನ ಕೊಡಲು ಸಾಧ್ಯವಿಲ್ಲವೇನು?" ಎಂಬುದಾಗಿ ಉತ್ತರ ಬಂತು. ಇದಕ್ಕೆ, 'ಮಂಗಳೂರಲ್ಲಿ ತಾನು ಅಂಗಡಿ ಮಾಡಿಕೊಂಡು ಕ್ಷೇಮವಾಗಿರುವೆ' ಎಂದು ಬಿಡಿಸಿ ಹೇಳಿದ ಮೇಲೆ ಸಂಕಣ್ಣನಿಗೆ ಹೆಂಡತಿಯನ್ನು ಕರೆದುಕೊಂಡು ಹೋಗಲು ಅನುಮತಿ ದೊರಕಿತು. ಆಗ ಮನೆಯಲ್ಲಿ ಗತಿಹೀನಳಂತೆ ಬೇಸರ ದಿಂದಿದ್ದ ಸೀತಕ್ಕನ ಮುಖದಲ್ಲಿ ತೆಳುನಗುವೊಂದು ಮೂಡಿ ಮಿಂಚಿತು. ಉಣಲು ಅನ್ನ, ಉಡಲು ಬಟ್ಟೆ ಎಷ್ಟಿದ್ದರೇನು? ಹೆಣ್ಣಿಗೆ ಗಂಡನಿಗಿಂತ ಹೆಚ್ಚಿನದಾವುದೂ ಇಲ್ಲವೆಂಬುದು ಸೀತಕ್ಕನ ಮುಖವನ್ನು ನೋಡಿದವರು ಈಗ ತಿಳಿದುಕೊಳ್ಳಬಹುದು.

ಮರುದಿನ ಸಂಕಣ್ಣ ಸೀತಕ್ಕನನ್ನು ಕರೆದುಕೊಂಡು ಮಂಗಳೂರಿಗೆ ಹೊರಟನು. ಹಾಗೂ ಅಂಗಡಿಯ ಹಿಂದುಗಡೆಯಲ್ಲಿರುವ ಸಣ್ಣ ಕೋಣೆ ಯಲ್ಲಿಯೇ ಅವನ ಕುಟುಂಬ ನೆಲೆಯೂರುವಂತಾಯಿತು. ಸಂಜೆಗೆ ಅಲ್ಲಿಗೆ ಬಂದ ಅವನ ಗೆಳೆಯನೊಬ್ಬನು ಆಡುತ್ತಿದ್ದ ಮಗುವನ್ನು ಕಂಡು, ಸಂತೋಷ ಗೊಂಡು "ಮಗುವಿಗೆ ಹೆಸರು ಏನೆಂದು ಇಟ್ಟರುವೆ?" ಎಂದು ಕೇಳಿದ. ಅಷ್ಟರ ವರೆಗೆ ಸಂಕಣ್ಣನ ವಿಚಾರದಲ್ಲಿ ಈ ವಿಷಯ ಬಂದಿರಲಿಲ್ಲ. ಮನೆಯಾಕೆಯೊಡನೆ ಕೇಳಿ ನೋಡಿದ. ಅದಕ್ಕೆ ಅವಳು ಮುಖ ತಗ್ಗಿಸಿ—"ಇಲ್ಲಿಯ ವರೆಗೆ ಯಾವ

ಹೆಸರನ್ನೂ ಇಡಲಿಲ್ಲ" ಎಂದು ಹೇಳಿದಳು. ಆಗ ಗೆಳೆಯನು, "ಇರಲಿ, ಇವ ನನ್ನು ರಮೇಶ ಎಂದು ಕರೆಯುವ. ಹೆಸರೂ ಸಣ್ಣದು. ಕರೆಯಲೂ ಸುಲಭವಾಗುತ್ತದೆ. ಈಗೀಗ ಹಳೆಯ ಕಾಲದ ಹೆಸರನ್ನು ಯಾರೂ ಮೆಚ್ಚು ವುದಿಲ್ಲ" ಎಂದು ಸೂಚಿಸಿದ. ಅದೇ ತನಗೆ ಒಪ್ಪಿಗೆಯೆಂದೇನೋ ಸಂಕಣ್ಣನೂ ನಗು ಬೀರಿದ.

ಮೊದಲು ಅಂಗಡಿಯ ಉತ್ಪತ್ತಿಯಲ್ಲಿ ಇವನ ಒಬ್ಬನದೇ ಕಾಲಹರಣೆ ಯಾಗಬೇಕಿತ್ತು. ಈಗ ಒಬ್ಬನ ಬದಲು ಮೂರು ಜೀವವಾಗಿದೆ. ಸಂಕಣ್ಣನ ವಿಚಾರ ಇನ್ನೂ ಬೆಳೆಯಿತು. ಅದಕ್ಕೆ ಅನುಭವವೂ ನೆರವಾಯಿತು. ವ್ಯಾಪಾರ ವನ್ನು ಬೆಳೆಸಿ ಅಂಗಡಿಯನ್ನು ದೊಡ್ಡದು ಮಾಡಬೇಕೆಂದು ಎಣಿಕೆಹಾಕ ತೊಡಗಿದ. ಬಗೆದಂತೆ ಮಾಡಿದ. ಕೂಲಿ ಗೆಳೆಯರ ಬೆಂಬಲ ಹೇಗೂ ಮೊದಲಿನಿಂದಲೂ ಇದ್ದೇ ಇತ್ತು. ಮಳೆಗಾಲ ಮುಗಿಯುತ್ತಾ ಮಂಜಿ ಪತ್ತೆಮಾರುಗಳು ನೀರಿಗಿಳಿಯ ತೊಡಗಿದಾಗ ವ್ಯಾಪಾರವು ಬೆಳೆಯ ತೊಡಗಿತು. ಉತ್ತರ ಹಿಂದುಸ್ಥಾನದ 'ಕೋಟ್ಯ' ಮತ್ತು ಅರಬಸ್ಥಾನದ 'ಬಗಲಾ'ಗಳು ಮಂಗಳೂರಿಗೆ ಸಾಮಾನು ಹೇರಿಕೊಂಡು ಬಂದ ಮೇಲೆ ವ್ಯಾಪಾರವು ಮತ್ತೂ ಬೆಳೆಯಿತು. ಹಾಗೂ ಅಂಗಡಿಯಿಟ್ಟು ವರುಷವೊಂದು ತುಂಬುವ ಹೊತ್ತಿಗೆ ಬದಿಯಲ್ಲಿ ಮತ್ತೊಂದು ಹೆಚ್ಚು ಸ್ಥಳವಿರುವ ಅಂಗಡಿ ಯನ್ನು ಸಂಕಣ್ಣ ಬಾಡಿಗೆ ಹಿಡಿದು ವ್ಯಾಪಾರ ಬೆಳೆಸಿದನು. ಮತ್ತು ಹೆಚ್ಚು ಹೆಚ್ಚಾಗಿ ನಿತ್ಯೋಪಯೋಗಿ ಸಾಮಾನುಗಳನ್ನು ಅಂಗಡಿಯಲ್ಲಿ ಸೇರಿಸಿದನು. ಅದರಿಂದಾಗಿ ಅಂಗಡಿಗೆ ಮತ್ತೂ ಹೆಚ್ಚು ಥಳಕು ಬರುವಂತಾಯಿತು. ಇದಕ್ಕೆಲ್ಲಾ ಕೂಲಿಗೆಳೆಯರ ಬೆಂಬಲವೇ ಮುಖ್ಯ ಕಾರಣವೆಂಬುದನ್ನು ಅವನು ಮರೆಯಲಿಲ್ಲ. ಇಷ್ಟರಲ್ಲಿಯೇ ಸಂಕಣ್ಣನ ಆಶೆ ಮುಗಿಯಲಿಲ್ಲ. ಸೂಡಿ ಕಟ್ಟಿಗೆ, ಸಿಪ್ಪೆಕಳೆದ ತೆಂಗಿನ ಕಾಯಿ, ಬಂದರಿಗೆ ಮೂಡಲಾಗಿನಿಂದ ನೇತ್ರಾ ವತಿ ನದಿಯ ಮುಖೇನ ದೋಣಿಯಲ್ಲಿ ತುಂಬಿಕೊಂಡು ಬರುತ್ತಿದ್ದ ಬಾಳೆ ಗೊನೆಗಳನ್ನೆಲ್ಲಾ ಕೊಂಡುಕೊಳ್ಳ ತೊಡಗಿದ. ಇದರಿಂದಾಗಿ ಸಣ್ಣಸಣ್ಣ ಅಂಗಡಿಕಾರರು ಸಂಕಣ್ಣನಿಂದ ತೆಂಗಿನ ಕಾಯಿ, ಬಾಳೆಗೊನೆಗಳನ್ನು ತೆಗೆದು ಕೊಳ್ಳಬೇಕಾಯಿತು.

ಹೀಗೆಯೇ ಕೆಲವು ವರುಷಗಳು ಕಳೆದುವು. ಇತ್ತ ರಮೇಶ ಬೆಳೆದು ಶಾಲೆಗೆ ಹೋಗ ತೊಡಗಿದ್ದ. ಅವನ್ನನುಸರಿಸಿ ಮೂರು ಮೂರು ವರುಷ

ಕ್ಕೊಂದರಂತೆ ಸೀತಕ್ಕ ಮಕ್ಕಳಿಗೆ ಜನ್ಮ ಕೊಡುತ್ತಾ ಬಂದಳು. ಎರಡನೆಯವ ಉಮೇಶ. ಮೂರನೆಯದು ಹೆಣ್ಣು ಮಗು ಕಮಲ. ಈಗ ಸೀತಕ್ಕ ಪುನಃ ಬಸುರಿಯಾಗಿರುವಳು. ಸಂಕಣ್ಣನ ಕೈಯಲ್ಲಿಯೂ ನಾಲ್ಕು ದುಡ್ಡಾಗಿತ್ತು. ತನ್ನ ಸ್ವಂತ ಮನೆಯಾಗಬೇಕೆಂಬ ಆಶೆ ಹುಟ್ಟಿತ್ತು. ಅಲ್ಲಿಯೇ ಬಂದರಿನ ಸ್ವಲ್ಪ ತೆಂಕಲಾಗಿಗೆ ಗೂಡ್ಸ್ ಶೆಡ್ಡಿನ ಮೂಡಲಿಗೆ ಈಚೆ ಬದಿಯಲ್ಲಿ ಒಂದು ಹಿತ್ತಿಲು ಮನೆಯನ್ನು ಬೆಲೆಗೆ ಕೊಂಡುಕೊಂಡನು. ಮನೆಯನ್ನು ದುರುಸ್ತಿ ಗೊಳಿಸಿ ಚೊಕ್ಕವಾಗಿ ಶೃಂಗರಿಸಿ ಹೆಂಡತಿ ಮಕ್ಕಳನ್ನು ಅಲ್ಲಿಗೆ ಕರೆದು ಕೊಂಡೊಯ್ದ. ಅಂಗಡಿಯಲ್ಲಿ ಎರಡು ಜನರನ್ನು ಕೆಲಸಕ್ಕೆ ನಿಲ್ಲಿಸಿದ. ಇಷ್ಟರಲ್ಲಿ ಅಂಗಡಿಗೆ ಸಾಮಾನು ತರುವುದಕ್ಕೆಂದು ಸ್ವಂತ ಎತ್ತಿನಗಾಡಿ ಮಾಡಿಸಿದ್ದನು. ವ್ಯಾಪಾರವೂ ಹಾಗೆಯೇ ಬೆಳೆಯುತ್ತಲಿತ್ತು. ಮನೆ ಕಟ್ಟುವವರಿಗೆ ಕಲ್ಲು ಬೇಕಿದ್ದರೆ, ದೊಡ್ಡದೊಡ್ಡ ಸಮಾರಂಭಕ್ಕೆಬೇಕಾದ ಸಾಮಾನು ಸರಂಜಾಮುಗಳನ್ನು ಒದಗಿಸಿ ಕೊಡುವ ಕಂಟ್ರಾಕ್ಟನ್ನು ಸಂಕಣ್ಣ ವಹಿಸಿಕೊಳ್ಳಲಾರಂಭಿಸಿದನು. ಅದಕ್ಕಾಗಿ ಇನ್ನೊಂದು ಜೋಡೆತ್ತಿನ ಗಾಡಿಯನ್ನು ಹೆಚ್ಚಿಗೆ ಮಾಡಿದನು. ಅಂಗಡಿಯಲ್ಲಿ ಅಕ್ಕಿಜೀನಸಿನ ವ್ಯಾಪಾರವನ್ನೂ ಮಾಡತೊಡಗಿ ಬದಿಯಲ್ಲಿ ಮತ್ತೊಂದು ಅಂಗಡಿಯನ್ನು ಕೂಡಿಸಿಕೊಂಡನು. ಅಲ್ಲದೆ ಬೇರೆ ಇಬ್ಬರನ್ನು ಕೆಲಸಕ್ಕೆ ನಿಲ್ಲಿಸಿಕೊಂಡನು. ಹೀಗೆ ಕೂಲಿ ಸಂಕಣ್ಣನಾಗಿದ್ದವನು, ಅಂಗಡಿ ಸಂಕಣ್ಣನಾಗಿ ಕಡೆಗೆ ಕಂಟ್ರಾಕ್ಟರ್ ಸಂಕಣ್ಣನವರಾಗಿ ಪರಿಣಮಿಸಿದನು.

* * * *
* *

ಮನೆಯೊಳಗೆ ಕಾಲಿಡುತ್ತಾ ರಮೇಶನು ತಲೆಯೆತ್ತಿ ಒಮ್ಮೆ ಸುತ್ತಲೂ ನೋಡಿದನು. ಮುದಿ ಹೆಂಗುಸೊಬ್ಬಳು ಅಂಗಳದಲ್ಲಿ ಕುಳಿತುಕೊಂಡು ನೀರಿನಲ್ಲಿ ತೊಯ್ದುಹಾಕಿದ್ದ ತೆಂಗಿನ ಮಡಲನ್ನು ಹೆಣೆಯುತ್ತಿದ್ದವಳು ಒಮ್ಮೆಗೆ ಎದ್ದು ನಿಂತು ಎರಡು ಹೆಜ್ಜೆ ಮುಂದಿಡುತ್ತಾ 'ರಮೇಶಾ' ಎಂದು ನಗು ಬೀರಿದಳು. ಆಗ ಮಾತ್ರ ಅದು ಮುದಿ ಹೆಂಗುಸಲ್ಲ ತನ್ನ ತಾಯಿ ಎಂಬುದಾಗಿ ರಮೇಶನು ತಿಳಿದನು. ಮನೆಯು ಅದಾವುದೋ ರೀತಿಯು ಸೊಗಸು ಬೀರಿ ತನ್ನನ್ನು ಬರ ಮಾಡಿ ಕೊಳ್ಳುತ್ತಿರುವುದೆಂದು ಭಾವಿಸಿದನು. ಅವನು ಹೋಗುವಾಗಿದ್ದ ತೆಂಗಿನ ಮರಗಳು ಈಗಲೂ ಇದ್ದುವು. ಬಾಳೆಸಸಿಗಳ ಪೊದೆಗಳು ತುಸು ಉಬ್ಬಿದ್ದವು. ಇನ್ನು ಕೆಲವು ಹಣ್ಣು ಹಂಪಲುಗಳ ಮರಗಳು ಸಾಲಾಗಿ ಅಂಗಳದ ಒತ್ತಿಗೆ ಎದ್ದು ನಿಂತಿದ್ದವು. ಅಂಗಳದ ಎದುರುಗಡೆಯಲ್ಲಿ ಬಣ್ಣಬಣ್ಣದ

ಹೂವಿನ ಗಿಡಗಳು ಮುಖವರಳಿಸಿ ಸ್ವಾಗತವನ್ನು ಕೋರುತ್ತಲಿದ್ದವು. ಆ ಮನೋಹರವಾದ ದೃಶ್ಯವನ್ನು ನೋಡುತ್ತಾ ಮನೆಯೊಳಗಿನ ಶಾಲೆಗೆ ಹೋಗುವ ಮಕ್ಕಳು ನೈಸರ್ಗಿಕ ಕಲಾಪ್ರಿಯರೆಂಬುದಾಗಿ ರಮೇಶ ತಿಳಿದ. ಹಡಗ ಸಂಚಾರದಿಂದ ಮೈಗೆ ಹತ್ತಿದ ಬೇಸರ ಮನೆಯೊಳಗೆ ಕಾಲಿಡುವಾಗ್ಗೆ ಉಳಿದಿರ ಲಿಲ್ಲ. ಊರಿಗೆ ಹೋಗಬೇಕೆಂದಿದ್ದಾಗ ಹುಟ್ಟಿದ್ದ ದಿಗಿಲು ಮನಸ್ಸಿನಲ್ಲಿ ನಿಂತಿರ ಲಿಲ್ಲ. ಸೀತಕ್ಕ ಹತ್ತಿರ ಬಂದು ರಮೇಶನ ತಲೆಯನ್ನು ಪೂಸಿದಳು. ಆಗ ಮನೆಯವರೆಲ್ಲರೂ ನೆರೆದರು. ರಮೇಶ ಮುಖವೆತ್ತಿ ಎಲ್ಲರನ್ನು ಒಮ್ಮೆ ನೋಡಲು ನಾಚಿಕೆಪಟ್ಟವನಂತೆ ಕಣ್ಣರಳಿಸಿದನು. ಸೀತಕ್ಕ ಅವನಿಗೆ ತನ್ನ ಮಕ್ಕಳನ್ನೊಬ್ಬೊಬ್ಬರನ್ನೆ ತೋರಿಸಿ, ಯಾರು ಯಾರು ಅವರ ಗುರುತು ಕೇಳಿ ದಳು. ಉಮೇಶ ಅಂಗಡಿಗೆ ಹೋದುದರಿಂದ ಅಲ್ಲಿರಲಿಲ್ಲ. ಕಮಲ ಈಗ ದೊಡ್ಡ ಹೆಂಗುಸಾಗಿದ್ದಾಳೆ. ಅವಳಿಗೆ ಎರಡು ವರುಷಗಳ ಹಿಂದೆಯೇ ಮದುವೆ ಯಾಗಿ ಈಗ ಕೈಯಲ್ಲಿ ಒಂದು ಪುಟ್ಟ ಮಗುವು 'ಪ್ಯಾಂ' ಎನ್ನುತ್ತಲಿತ್ತು. ಆವಳ ಬೆನ್ನಹಿಂದಿನವಳಾದ ಲಲಿತ ಈಗ ಸೀರೆ ಉಟ್ಟುಕೊಂಡು ಸೆರಗು ಅಲ್ಲಾಡಿಸು ತ್ತಿದ್ದಳು. ಶಾಲೆಯ ರಂಗು ಅವಳ ಮೈಮೇಲೆ ಚೆನ್ನಾಗಿ ಮೂಡಿತ್ತು. ಮದು ವೆಯ ಪ್ರಾಯ ಮುಖಕ್ಕೆ ಮೆರಗು ಕೊಟ್ಟಿತ್ತು. "ಪ್ರಾಯಕ್ಕೆ ಬಂದಳೆಂದು ಮೊನ್ನೆಯೇ ಶಾಲೆ ಬಿಡಿಸಿರುವೆವು" ಎಂದು ಸೀತಕ್ಕ ಲಲಿತೆಯ ಚರಿತ್ರೆಯನ್ನು ಹೇಳಿದಳು. ಬೇರೆ ಉಳಿದವರು ಗೋಪಾಲ, ಗೋವಿಂದ ಮತ್ತು ಲಕ್ಷ್ಮಿ. ರಮೇಶ ಮುಂಬಯಿಗೆ ಹೋಗುವಾಗ್ಗೆ ಲಕ್ಷ್ಮಿ ಚಕಚಕ ನಡೆಯುತ್ತಿದ್ದಳು. ಅವಳೆ ಈಗ ಚೀಲ ಹಿಡಿದುಕೊಂಡು ಗೋಪಾಲ ಮತ್ತು ಗೋವಿಂದರ ಒಟ್ಟಿಗೆ ಶಾಲೆಗೆ ಹೋಗಲು ಎದ್ದು ನಿಂತಿದ್ದಳು. ಮುಂದೆ ಸೀತಕ್ಕ ಯಾರ ಪರಿಚಯ ವನ್ನೂ ಮಾಡಿಸಲು ಹೋಗಲಿಲ್ಲ. ಬಹುಶಃ ಲಕ್ಷ್ಮಿಯೇ ಕಡೆಯ ಸಂತತಿ ಯಾಗಿರಬೇಕೆಂದು ರಮೇಶ ಊಹಿಸುವವನಾದ.

ಮಿಂದು ಊಟ ತೀರಿಸಿಯಾದ ಮೇಲೆ ಸಂಕಣ್ಣ ರಮೇಶನನ್ನು ಕರೆದು ಕೊಂಡು ಅಂಗಡಿಗೆ ಹೋದರು. ಅಲ್ಲಿ ಉಮೇಶ ಅಂಗಡಿಯ ಲೆಕ್ಕ ಬರೆಯು ವುದರಲ್ಲಿ ತಲ್ಲೀನನಾಗಿದ್ದ. ಐದು ಜನ ಕೆಲಸದಾಳುಗಳು ಒಬ್ಬೊಬ್ಬರು ಒಂ ದೊಂದು ಕೆಲಸದಲ್ಲಿ ತೊಡಗಿದ್ದರು. ಒಬ್ಬ ಅಂಗಡಿಯ ಹೊರಬದಿಯಲ್ಲಿ ತೆಂಗಿನ ಕಾಯಿಗಳನ್ನು ರಾಶಿ ಹಾಕಿಕೊಂಡು ಸಿಪ್ಪೆ ಸುಲಿಯುತ್ತಲಿದ್ದನು. ಬೇರೆ ಇಬ್ಬರು ಅಕ್ಕಿಯನ್ನು ಮುಡಿಯಿಂದ ಸುರಿಯುತ್ತಿದ್ದರು. ಮತ್ತೊಬ್ಬ ಎಳೆಪ್ರಾ

ಯದ ತರುಣನು ಮಂಡದಲ್ಲಿ ಕುಳಿತಿದ್ದ. ಇನ್ನೊಬ್ಬ ಗಿರಾಕಿಗಳಿಗೆ ಸಾಮಾನು ಆರಿಸಿ ಕೊಡುತ್ತಲಿದ್ದ. ಸಂಕಣ್ಣನನ್ನು ಕಂಡು ಕೆಲಸದಾಳುಗಳು ವಂದಿಸಿದರು. ರಮೇಶನು ಅವರ ಹತ್ತಿರದಲ್ಲಿಯೇ ನಿಂತಿದ್ದುದರಿಂದ ಅವನೇ ರಮೇಶನಾಗಿರ ಬೇಕೆಂದು ಬಗೆದು ಗುರುತು ಹಿಡಿಯುವಂತಾದರು.

ರಮೇಶನು ಮನಸ್ಸು ಮಾಡಿದ್ದರೆ ಈ ಅಂಗಡಿಯು ಸಂಪೂರ್ಣ ಅವನ ಸ್ವಾಧೀನ ಬರುತ್ತಿತ್ತು. ಬೇಕಾದರೆ ಈಗಲೂ ಬರಬಹುದು. ಉಮೇಶನು ಓದುಬರೆಯುವುದರಲ್ಲಿ ಅಷ್ಟೇನೂ ಹುಷಾರು ಇದ್ದಿಲ್ಲ. ರಮೇಶನಷ್ಟು ಸಂಕ ಣ್ಣನ ಮನಸ್ಸಿಗೂ ಬಂದಿರಲಿಲ್ಲ. ರಮೇಶನು ಎಂದೂ ಹೆತ್ತವರಿಗೆ ಎದುರು ಮಾತಾಡಿದವನಲ್ಲ. ಮನೆಯೊಳಗೆ ಚರ್ಚೆಮಾಡಿ ಹಿರಿಯರ ಮನ ನೋಯಿಸಿ ದವನಲ್ಲ. ಸಂಕಣ್ಣನ ಎಣಿಕೆಯಂತೆ ಅವರ ಎಲ್ಲಾ ವ್ಯವಹಾರಗಳನ್ನು ಮುಂದಕ್ಕೆ ರಮೇಶನೇ ಮಾಡುತ್ತಾ ಬರಬೇಕಿತ್ತು. ಆದರೆ ಅಂಥಾ ಹುಮ್ಮಸ್ಸು ರಮೇಶ ನಲ್ಲಿ ಸ್ವಲ್ಪವೂ ಮೂಡಿದ್ದಿಲ್ಲ. ಅಂಗಡಿಯ ಕೆಲಸದಾಳುಗಳನ್ನು ಜೋರು ಮಾಡಿ ಕೆಲಸ ಮಾಡಿಸುವ ಇಚ್ಛೆಯಾಗಲೀ ಗಾಡಿ ಹೊಡೆಯುವ ದೂಮಣ್ಣ ಮತ್ತು ರಂಗಣ್ಣನಿಗೆ ಕಟ್ಟಪ್ಪಣೆ ಮಾಡುವ ಇಚ್ಛೆಯಾಗಲೀ ರಮೇಶನಲ್ಲಿದ್ದಿಲ್ಲ. ಯಾಕೆ ಅವರಿಗೆ ಜೋರು ಮಾಡಬೇಕು; ಯಾಕೆ ಅವರ ಮನಸ್ಸನ್ನು ನೋ ಯಿಸ ಬೇಕೆಂಬುದು ಅವನ ವಿಚಾರಕ್ಕೆ ಬರುತ್ತಿದ್ದಿಲ್ಲ. ಸಂಕಣ್ಣನ 'ಕಂಟ್ರಾ ಕ್ಟತನ'ದಿಂದಾಗಿ ಅಂಗಡಿಗೆ ಮತ್ತು ಮನೆಗೆ ಬಹಳ ಜನರು ಬಂದು ಹೋಗುತ್ತಿ ದ್ದರು. ಅವರೂ ಬೆಚ್ಚನೆ ನೆಮ್ಮದಿಯಿಂದ ಕುಳಿತಿರುವ ರಮೇಶನನ್ನು ನೋಡಿ ದ್ದರು. ರಮೇಶನು ಮೆಟ್ರಿಕ್ಯು ಮುಗಿಸಿದ ನಂತರ ಅಂಗಡಿಯಲ್ಲಿಯೇ ಕುಳಿತು ಕೊಳ್ಳುವಂತಾಗಬೇಕೆಂದು ಸಂಕಣ್ಣ ಬಹಳ ಪ್ರಯತ್ನ ಮಾಡಿದ್ದರು. ಆ ವಿಚಾರ ರಮೇಶನ ಮನಸ್ಸಿನಲ್ಲಿ ಮೂಡಲೇ ಇಲ್ಲ. ಸಂಕಣ್ಣ ಬಹಳ ವಿಧ ದಿಂದ ಹೇಳಿ ನೋಡಿದರು. ಕಡೆಗೆ ಒತ್ತಾಯದಿಂದ ಅಂಗಡಿಯಲ್ಲಿ ಕುಳ್ಳಿ ರಿಸಿದಾಗ್ಗೆ ಬೇರೆಯವರ ಅಂಗಡಿಯಲ್ಲಿ ದಾಕ್ಷಿಣ್ಯಕ್ಕೆ ಒಳಗಾಗಿ ಕುಳಿತವನಂತೆ ಬೆಪ್ಪನಂತೆ ಕುಳಿತು ಕೊಳ್ಳುತ್ತಿದ್ದನು. ಸಂಕಣ್ಣ ಎಲ್ಲಿಗಾದರೂ ಹೋಗಿದ್ದರೆ, ಕೆಲಸದಾಳುಗಳು ಈ ಸಂದರ್ಭದ ಪ್ರಯೋಜನವನ್ನು ಚೆನ್ನಾಗಿ ಪಡೆಯು ತ್ತಿದ್ದರು. ಖರ್ಚಿಗೆ ಹಣ ಬೇಕೆಂದು ಕೇಳಿದಾಗ, ಚಹ ಕುಡಿಯಲು ಹಣ ಕೇಳಿದಾಗ ಕೈನೀಡಿ, ಸ್ವಲ್ಪವೂ ಮನಸ್ಸು ಮುರಿದುಕೊಳ್ಳದೆ ಕೊಡುತ್ತಿದ್ದನು. ಹಳೆಯ ಇಬ್ಬರು ಆಳುಗಳು ಮಾತ್ರ ಧರ್ಮದಿಂದ ನಡೆಯುತ್ತಿದ್ದರೆಂದು ಹೇಳ

ಬಹುದು. ಅವರು ಸಂಕಣ್ಣನಿಗೂ ಮನೆಯ ಜನರಂತೆ ಹತ್ತಿರದವರಾಗಿದ್ದರು. ತಮಗೆ ಬೇಕಾದುದನ್ನು ಅವಶ್ಯವಿರುವಷ್ಟೆ ಮನೆಗೆ ಕೊಂಡು ಹೋಗುತ್ತಾ ಅಂಗಡಿಯ ಕೆಲಸವನ್ನು ತಮ್ಮ ವಿಚಾರದಂತೆ ಮಾಡುತ್ತಿರಲು ಸ್ವತಂತ್ರರಾಗಿದ್ದರು. ಹಾಗೆಯೇ ಇರುವುದು ಒಳ್ಳೆದೆಂದು ರಮೇಶನ ವಿಚಾರ. ಆದರೆ ಎಲ್ಲ ನೌಕರರೂ ಹಾಗೆ ಸಭ್ಯತನದಿಂದಿರಲಾರರೆಂಬುದನ್ನು ಅವನು ತಿಳಿಯಲಾರ. ಸಂಕಣ್ಣನ ದೃಷ್ಟಿ ನಾಲ್ಕುಕಡೆಗೂ ತಿರುಗುತ್ತಿದ್ದುದರಿಂದ ಅವರಿಗೆ ಆ ಸಂಗತಿಗಳೆಲ್ಲ ಗೊತ್ತು.

ಹೀಗೆ ಎರಡು ಮೂರು ವರುಷಗಳು ಕಳೆಯುವಷ್ಟರಲ್ಲಿ ಸಂಕಣ್ಣನಿಗೆ ರಮೇಶನ ವ್ಯವಹಾರದ ಮೇಲೆ ಬೇಸರ ಹಿಡಿದುಹೋಯಿತು. ಮತ್ತೊಂದು ದಿಕ್ಕಿನಲ್ಲಿ ಮೆಟ್ರಿಕ್ಕು ಪರೀಕ್ಷೆಗೆ ಕಟ್ಟಿದ ಉಮೇಶನೂ ಸೋತು ಕೈ ತೊಳೆದುಕೊಂಡನು. ಸಂಕಣ್ಣ ಉಮೇಶನನ್ನು ಅಂಗಡಿಗೆ ಬರುವಂತೆ ಹೇಳಿದರು. ಅವರ ಅಪ್ಪಣೆ ಸಂದೇಶ ಸಿಗುವುದೇ ತಡ ಉಮೇಶನು ಕಾಲು ತೊಳೆದು ಆನಂದದಿಂದ ಅಂಗಡಿ ಹತ್ತಿದನು. ಯಾಕೆಂದರೆ ಅಂಗಡಿಗೆ ತಪ್ಪಿಸಿದರೆ ಇನ್ನೂ ಶಾಲೆಗೆ ಹೋಗಲು ಸಿಗಬಹುದಿತ್ತು. ಉಮೇಶ ಅಂಗಡಿಯಲ್ಲಿ ಗಟ್ಟಿ ಮಾಡಿದುದೇ ತಡ ರಮೇಶ ಅಂಗಡಿಯಿಂದ ದೂರದೂರವಾಗಲು ನೋಡಿದನು. ಈ ಕುರಿತು ಸೀತಕ್ಕ ಅವನಿಗೆ ಎಷ್ಟೋ ಬಾರಿ ಹೇಳಿದ್ದುಂಟು. ಅವನ ಕಿವಿಗೆ ತಾಯಿಯ ಮಾತು ಬಿದ್ದಿತೋ ಏನೆಂಬುದಿಲ್ಲ. ದಿನದಲ್ಲಿ ಸ್ವಲ್ಪ ಓದುವುದು; ಸ್ವಲ್ಪ ಅಡ್ಡಾಡುವುದು; ತೋಟದಲ್ಲಿ ಉದ್ದಕ್ಕೆ ತಿರುಗಾಡುವುದು. ಸ್ವಲ್ಪ ಅಂಗಡಿಯಲ್ಲಿಯೂ ಕುಳಿತುಕೊಳ್ಳುವುದು. ಈ ರೀತಿಯಲ್ಲಿ ಅವನ ದಿನಗಳು ಸಾಗುತ್ತಲಿದ್ದುವು. ಅಂಗಡಿಯಲ್ಲಿ ಕುಳಿತುಕೊಂಡು ಸಾಹುಕಾರಿಕೆ ಮಾಡುವುದಕ್ಕಿಂತ ಅವನಿಗೆ ತಾಯಿಯ ಬಳಿಯಲ್ಲಿ ಕುಳಿತುಕೊಂಡು ಹರಟೆ ಹೊಡೆಯುವುದು ಒಪ್ಪುತ್ತಿತ್ತು. ಸೀತಕ್ಕ ಮನಸ್ಸು ಮಾಡಿದ್ದರೆ, ಮನೆಗೆಲಸಕ್ಕೆ ಒಬ್ಬಿಬ್ಬರನ್ನು ನೇಮಿಸಬಹುದಿತ್ತು. ಅಂಥಾ ವಿಚಾರ ಸೀತಕ್ಕನಲ್ಲಿ ಹುಟ್ಟಲೇ ಇಲ್ಲ. ತಾನು ಮತ್ತು ತನ್ನ ಬೆಳೆದ ಹೆಣ್ಣು ಮಕ್ಕಳಾದ ಕಮಲ ಲಲಿತೆಯರಿಂದ ಮನೆಯ ಕೆಲಸಗಳನ್ನು ಮಾಡಿ ಮುಗಿಸುತ್ತಿದ್ದಳು. ಕೈಬಿಟ್ಟು ಕುಳಿತುಕೊಳ್ಳುವುದು ಅವಳಿಗೆ ಒಪ್ಪುತ್ತಿರಲೇ ಇಲ್ಲ. ಮನೆಯ ಕೆಲಸ ಮುಗಿದರೆ ತೋಟದಲ್ಲಿ ಅಡ್ಡಾಡಿ ಯಾವ ತೆಂಗಿನ ಮರದ ನೀರ್ಕಟ್ಟೆ ಜರಿದಿದೆ, ಯಾವ ಮರದಲ್ಲಿ ಕಾಯಿ ಹಣ್ಣಾಗಿದೆ, ಎಲ್ಲಿ ಬೇಲಿ ಮುರಿದಿದೆ, ಎಲ್ಲಿ ಸೋಗೆಗಳು ಉದುರಿವೆ

ಎಂಬುದನ್ನು ನೋಡುತ್ತಾ ಹೋಗುವಳು. ಅದೂ ಇಲ್ಲದಿದ್ದರೆ ಅಂಗಡಿಗೆ ಕಮಲೆಯನ್ನೋ ಲಲಿತೆಯನ್ನೋ ಕಳುಹಿಸಿಕೊಟ್ಟು ಮೆಣಸು, ಸಂಬಾರ ಮೊದಲಾದ ಜೀನಸುಗಳನ್ನು ಮನೆಗೆ ತರಿಸಿ ಅದರಲ್ಲಿಯ ಕಲ್ಲು ಕಸವನ್ನು ಆರಿಸುತ್ತಿದ್ದಳು. ಅದೇ ಪ್ರಕಾರ ಅವಳು ತನ್ನ ಹೆಣ್ಮಕ್ಕಳನ್ನು ತನ್ನಂತೆ ದುಡಿಸಿಕೊಳ್ಳುತ್ತಿದ್ದಳು. ಆದರೆ ಇವರಲ್ಲಿ ಯಾರಿಂದಲೂ ರಮೇಶನನ್ನು ಇವರುಗಳೆಲ್ಲ ಆಶಿಸುವ ಮಾರ್ಗಕ್ಕೆ ಎಳೆಯಲಿಕ್ಕಾಗಲಿಲ್ಲ. ಕೆಲವು ಬಾರಿ ರಮೇಶನ ವರ್ತನೆಯನ್ನು ಕಂಡು "ಕೆಲಸಕ್ಕೆ ಬಾರದವ"ನೆಂದು ಸಂಕಣ್ಣನವರು ಗುಣುಗುಟ್ಟಿದ್ದುಂಟು. ಆ ಮಾತಿಗೆ ರಮೇಶ ಉತ್ತರವಿತ್ತಿದ್ದಿಲ್ಲ. ಉತ್ತರ ಕೊಡಬೇಕೆಂಬ ನಿರ್ಧಾರಕ್ಕೆ ಬಂದುದೂ ಇಲ್ಲ. ಆದರೆ ಸೀತಕ್ಕ ಬಾಯಿ ಬಿಗಿದೂ ಬಿಗಿಯಲಾಗದೆ, "ಅವನು ಹುಟ್ಟುವಾಗ ನಿಮ್ಮ ಬುದ್ಧಿ ಹೇಗಿತ್ತು?" ಎಂದು ಉದ್ಗರಿಸಿದ್ದುಂಟು. ಇದಾಗಿ ಕೆಲವು ದಿನಗಳ ಮೇಲೆ ಒಂದು ದಿನ ರಮೇಶನು ತಾಯಿಯ ಬಳಿಗೆ ಬಂದು, "ನಾನು ಮುಂಬಯಿಗೆ ಹೋಗಿ ಬರುತ್ತೇನೆ" ಎಂದು ಸಾಮಾನು ಕಟ್ಟತೊಡಗಿದನು. ಅದಕ್ಕೆ ಯಾರೂ ಏನನ್ನೂ ಅನ್ನಲಿಲ್ಲ. ಆ ರೀತಿಯಿಂದಲಾದರೂ ಅವನ ಮನಸ್ಸು ಸ್ಥಿರಗೊಳ್ಳಲೆಂದು ಸುಮ್ಮಗಿದ್ದರು. ರಮೇಶ ಮುಂಬಯಿಗೆ ಬಂದು ನಿಂತವನು ಮೂರು ನಾಲ್ಕು ವರುಷಗಳ ವರೆಗೆ ಯಾರ ಗೊಡವೆಯೂ ಇಲ್ಲದೆ ಇದ್ದುದರಿಂದಲೇ ಸಂಕಣ್ಣ ಅವನನ್ನು ಹಿಂತಿರುಗಿ ಕರೆದುಕೊಂಡು ಹೋಗಲು ಮುಂಬಯಿಗೆ ಬರಬೇಕಾಯಿತು.

ಅದೇ ರಮೇಶ ಇಂದು ಮತ್ತೊಮ್ಮೆ ಅಂಗಡಿವ್ಯಾಪಾರದಿಂದ ಸಾಹುಕಾರಿಕೆ ಮಾಡಲು ಹಿಂತಿರುಗಿ ಬಂದನು. ಈ ಸಲ ಅವನು ವ್ಯಾಪಾರದ ಮೇಲೆ ಸಂಪೂರ್ಣ ಮನಸ್ಸುಕೊಟ್ಟು ಮುಂದಕ್ಕೆ ಮನೆತನ ನಡೆಸುವ ಭಾರವನ್ನು ಹೊರಬಹುದೆಂದು ಸಂಕಣ್ಣನವರು ಬಗೆದುದಕ್ಕೆ ಸೀತಕ್ಕನ ಒಪ್ಪಿಗೆಯೂ ದೊರಕಿತು. ಸ್ವಲ್ಪ ಮಟ್ಟಿಗೆ ಅದರಂತೆಯೇ ಆಯಿತೆನ್ನಬಹುದು. ಗೋಪಾಲ ಮತ್ತು ಗೋವಿಂದ ಶಾಲೆಗೆ ಹೋಗಿ ಬಂದವರು ಮನೆಯ ಎದುರಿನ ಹೂಗಿಡಗಳನ್ನು ನೋಡಿ, ನೀರೆರೆಯುತ್ತಿದ್ದಾಗ್ಗೆ ರಮೇಶ ಹಿಗ್ಗುತ್ತಿದ್ದ. ಎಲ್ಲರಿಗಿಂತಲೂ ಕಿರಿಯವಳಾದ ಲಕ್ಷ್ಮಿ ಬಾಲಬೋಧಿನಿಯನ್ನು ಹಿಡಿದು ಮನೆಯ ಎಲ್ಲರ ಕಿವಿ ಕರಡಾಗುವಂತೆ ಓದುತ್ತಿದ್ದಾಗ್ಗೆ ರಮೇಶ ಹಾರಿಬೀಳುತ್ತಿದ್ದ. ಇಷ್ಟರಲ್ಲಿ ಕಮಲೆಯ ಗಂಡನ ಮನೆಯವರು ಅವಳನ್ನು ಕರೆದೊಯ್ಯಲು ಬಂದುದರಿಂದ

ತೊಟ್ಟಿಲ ಮಗು ಸಹಿತ ಹೋಗಬೇಕಾಯಿತು. ಲಲಿತಳೊಬ್ಬಳೇ ತಾಯಿಯ ಜತೆ ಉಳಿದಳು. ಉಳಿದವರೆಲ್ಲರೂ ಶಾಲೆಗೆ ಹೊರಟು ಹೋದ ಮೇಲೆ ತನ್ನ ಜತೆ ಯಾರೂ ಮಾತಾಡಲು ಇಲ್ಲವೆಂದು ರಮೇಶನು ಅಂಗಡಿಯ ಕಡೆಗೆ ಹೊರಡುತ್ತಿದ್ದ. ಒಮ್ಮೊಮ್ಮೆ ಸಂಕಣ್ಣನ ಜತೆಗೆ ವಹಿವಾಟದ ಸಲುವಾಗಿ ಎಲ್ಲಿ ಗಾದರೂ ಹೋಗುತ್ತಲಿದ್ದ. ಯಾವಾಗಲೊಮ್ಮೆ ಸಂಕಣ್ಣ ಬಾ ಎಂದು ಕರೆ ದರೂ ಹೋಗದಿರುವ ದಿನಗಳಿವೆ. ಸೀತಕ್ಕ ಅಂಗಳದಲ್ಲಿ ತೆಂಗಿನ ಮಡಲು ಹೆಣೆಯುತ್ತಾ ಕುಳಿತಿದ್ದಾಗ ರಮೇಶನೂ ಹೋಗಿ ಬಳಿಯಲ್ಲಿ ಕೂತುಕೊಂಡ ದ್ದುಂಟು. ಒಂದು ದಿನ ತಾಯಿ ಮಗ ಅಂಗಳದಲ್ಲಿ ಕುಳಿತುಕೊಂಡು ಮಾತಾ ಡುತ್ತಿದ್ದಾಗ್ಗೆ ಮನೆಯೊಳಗಿನಿಂದ ನಗುತ್ತಾ ಬಂದ ಲಲಿತೆಯು ರಮೇಶನನ್ನು ಅಡಿಯಿಂದ ಮುಡಿಯ ವರೆಗೆ ನೋಡಿ,

"ಅಣ್ಣಾ, ಅಂಗಡಿಗೆ ಹೋಗುವುದಿಲ್ಲವೋ" ಎಂದು ಕೇಳಿದಳು.

"ಇಲ್ಲ. ಹೋಗಿ ಏನು ಮಾಡುವುದು ಅಲ್ಲಿ?" ಎಂದು ರಮೇಶ ರೆಪ್ಪೆ ಮುಚ್ಚದೆ ಉತ್ತರಿಸಿದ.

"ನಿನ್ನನ್ನು ಅಪ್ಪ ಮುಂಬಯಿಯಿಂದ ಕರೆತಂದುದು ಅಂಗಡಿ ಯಲ್ಲಿ ಕುಳ್ಳಿರಿಸಬೇಕೆಂದು. ನಿನ್ನ ಈ ಮಾತನ್ನು ಅಪ್ಪ ಕೇಳಿ ದರೆ, "ಅವನ ಹುಚ್ಚು ಇನ್ನೂ ಬಿಡಲಿಲ್ಲವೆಂದ"ನ್ನ ಬಹುದು"

"ನಿನಗೆ ನಾನು ಹುಚ್ಚನಂತೆ ಕಾಣುತ್ತಿರುವೆನೆ ಲಲಿತಾ!"

"ಹೇಳಿದ ಕೂಡಲೇ ಹುಚ್ಚರಾಗುತ್ತಾರೋ. ಬರೇ ಒಂದು ಮಾತದು"

"ಒಟ್ಟು ನಿನ್ನ ಮಾತಿನ ಅರ್ಥ ಮನೆಯವರು ಹೇಳಿದಂತೆ ನಾನು ಮಾಡಬೇಕೆಂದು; ಅಲ್ಲವೇ?"

"ನಾನು ಹೇಳಿದಂತೆ ಮಾಡಲು ನೀನು ನನಗಿಂತ ಕಿರಿಯವನೇ?"

"ಕಿರಿಯನೆಂದಲ್ಲ. ಈಗ ಹಿರಿಕಿರಿತನದ ಪ್ರಸ್ತಾಪ ಎಲ್ಲಿ ಎದುರಿಗೆ ಬರುತ್ತದೆ? ಬಾಯಿತುಂಬ ಮಾತಾಡುವವರೆ ಯಾವ ಕೆಲಸ ವನ್ನೂ ಮಾಡಲು ಅರ್ಹರೆಂದು ತಿಳಿದುಕೊಳ್ಳಬೇಕು, ಅಲ್ಲವೇ."

"ನನಗೇನು ಅದು ಗೊತ್ತಿಲ್ಲ. ನಿನಗೆ ಅಡಿಗೆ ಮಾಡಲು ಹೋಗಿ ನನ್ನ ಕೈ ಸುಟ್ಟು ಹೋಯಿತು. ಅದಕ್ಕೇನು ಹೇಳುತ್ತೀ."

"ಅಡಿಗೆ ಮಾಡುವಾಗ್ಗೆ ಕೈ ಸುಟ್ಟಿತೆಂದು ಹೆದರಿ ಓಡಬೇಡ.

ಅಡಿಗೆ ಮಾಡಲು ಈಗ ತಪ್ಪಿಸಿದರೆ, ಗಂಡನ ಮನೆಗೆ ಹೋದ ಮೇಲೆ ಅತ್ತೆ ನಾದಿನಿಯರ ಹಿಂಸೆಗೆ ಗುರಿಯಾಗಬೇಕಾದೀತು"

"ಈಗ ಮನೆಯಲ್ಲಿ ನನ್ನ ಮದುವೆಯ ಮಾತು ನಡೆಯುತ್ತಿರುವು ದಲ್ಲ. ನಾಳೆ ಮದುಮಗಳು ಬಂದಾಗ್ಗೆ ತಿಳಿಯುವುದು."

ಲಲಿತೆಯ ಈ ಮಾತಿನಿಂದ ರಮೇಶ ಮೊದಲು ಬೆಪ್ಪಾದ ಆದರೆ ಕೂಡಲೇ ತನ್ನನ್ನು ಸುಧಾರಿಸಿಕೊಂಡು,

"ನನ್ನ ಮದುವೆ ನಾಲ್ಕು ದಿನ ಮುಂದಕ್ಕೆ ಹೋದರೆ, ಅಪ್ಪ ಅಬ್ಬೆಯರು ಅಂಥದ್ದೇನು ದುಃಖಕ್ಕೀಡಾಗಲಾರರು. ಮೊದಲು ಆಗಬೇಕಾದುದು ನಿನ್ನ ಮದುವೆ. ಆಗ ಮಾತ್ರ ಹೆತ್ತವರ ಮನಸ್ಸು ನೆಮ್ಮದಿಯಿಂದುಳಿಯುವುದು" ಎಂದು ಲಘುವಾಗಿ ಹೇಳಿದ.

"ನನ್ನ ಮದುವೆಗಲ್ಲ ಅಪ್ಪ ಈಗ ಅಲ್ಲಿಗಿಲ್ಲಿಗೆ ಓಡಾಡುವುದು."

"ಗಂಡು ಹುಡುಗರ ಮದುವೆಗೆ ಯಾರೂ ಓಡಾಡಬೇಕೆಂದಿಲ್ಲ. ಹೆಣ್ಣು ಕೊಡುವವರು ಮಾತ್ರ ಈ ಕಾಲದಲ್ಲಿ ಸ್ವಲ್ಪ ಕಾಲು ಸವೆಸ ಬೇಕಾಗುತ್ತದೆ. ಆದಕ್ಕಾಗಿಯೇ ತಾಯಿ ಹೇಳುತ್ತಾ ಬಂದಿರುವುದು, ಹೆಣ್ಮಕ್ಕಳು ಮನೆಯೊಳಗಿನ ಪ್ರತಿಯೊಂದು ಕೆಲಸದಲ್ಲಿಯೂ ನುರಿತಿರಬೇಕೆಂದು. ಬರೇ ಶಾಲೆ ಕಲಿತರೂ ಸಾಲದು. ಮನೆ ಕೆಲಸ ಕಲಿತರೂ ಸಾಲದು. ಮದುವೆ ಯಾಗುವ ಹುಡುಗರು ಕೆಲವರು ಶಾಲೆಯ ಹುಡುಗಿಯರನ್ನು ಮೆಚ್ಚುತ್ತಾರೆ. ಮನೆಯ ಹಿರಿಯರು ಹೆಣ್ಣು ನೋಡಿ ನಿಶ್ಚಯಿ ಸುವುದಾದರೆ, ಮನೆಗೆಲಸ ಚೆನ್ನಾಗಿ ಗೊತ್ತಿರುವ, ಜಾಗ್ರತೆ ಮಾಡಬಲ್ಲ ಹುಡುಗಿಯರನ್ನೆ ಮೊದಲು ಮೆಚ್ಚುತ್ತಾರೆ".

"ಸಾಕು, ಸಾಕು ನಿನ್ನ ಪುರಾಣ. ಮಾತಾಡಲು ಹೊರಟ ಮೇಲೆ ಏನೇನೋ ಮಾತನಾಡುತ್ತಿರುವಿ."

"ಇಷ್ಟಕ್ಕೆ ಬೇಸರವೇಕೆ? ನೀನೇನೊ ಈ ಎಲ್ಲ ಮೆಟ್ಟಲುಗಳನ್ನು ದಾಟಿರುವಿ. ಶಾಲೆ ಹೇಗೂ ಕಲಿತಿರುವಿ. ಮನೆಗೆಲಸದಲ್ಲಿ ಮೊದಲೇ ಒಂದನೇ ನಂಬರು. ಅಷ್ಟೇ ಅಲ್ಲದೆ........."

"ಇನ್ನೂ ಕಥೆ ಉದ್ದ ಇದೆಯೇನು?"

"ಕಥೆ ಕಟ್ಟಲು ನನಗೆ ಗೊತ್ತಿಲ್ಲ. ಮುಖ ನೋಡಿ ಮಾತನಾ

ಡಲು ನಾನು ತಿಳಿದಿಲ್ಲ. ಮನಸ್ಸಿಗೆ ಬಂದುದನ್ನು ಸ್ಪಷ್ಟವಾಗಿ ನಿರಾಯಾಸದಿಂದ ಹೇಳಿಬಿಡುವುದು ನನ್ನ ಸ್ವಭಾವ. ಬಿಚ್ಚು ಮಾತಿನಿಂದ ನಿನ್ನಂಥವರಿಗೆ ಬೇಸರವಾಗುತ್ತದೆ ಹೌದು. ನನ್ನಂಥ ಸಂತೋಷಪಡುವ ದಡ್ಡರೂ ಇದ್ದಾರೆ. ನೋಡು, ನಿನ್ನಂತೆ ಸಿಂಗರಿಸಿಕೊಳ್ಳಲು ಸಾಧಾರಣ ಈ ವಠಾರದಲ್ಲಿ ಯಾರಿಗೂ ಬರುವುದಿಲ್ಲ. ಕೆಲವರು ಜೋಕಿನಿಂದ ಹದಿನೆಂಟು ಮೊಳದ ಸೀರೆಯನ್ನು ಉಡುತ್ತಾರೆ. ಅಷ್ಟು ಉದ್ದ ಸೀರೆ ಉಟ್ಟುಕೊಂಡವರಿಗೆ ಅದು ಎಷ್ಟು ಆನಂದವನ್ನುಂಟುಮಾಡು ವುದೋ ಅಷ್ಟೇ ಅವರ ರೂಪದಲ್ಲಿಯೂ ಬದಲಾವಣೆಗೊಳಿಸಿ ಬಿಡುವುದು. ಎದುರಿನಲ್ಲಿ ಹೊಟ್ಟೆ ಬಸುರಿಯರಂತೆ ಎತ್ತರವಾಗು ವುದು. ನಡೆಯುವಾಗ ಕಾಲು ಕಟ್ಟಿದಂತಾಗುವುದು. ಮತ್ತು ಸೆರಗು ಜಾರಿಬೀಳುವುದು ಅಥವಾ ಹಾರಿಹೋಗುವುದು. ಹೇಗೂ ಸಿನೇಮ ನಟಿಯರ ಅನುಕರಣೆ ಮಾಡುವವರಿಗೇನು ಕಡಮೆ ಇಲ್ಲವಪ್ಪಾ".

"ಸೀರೆಯನ್ನು ಉಡುವುದು ನೀನು ತಂದು ಕೊಟ್ಟುದುದನ್ನು" ಎಂದು ಲಲಿತೆಯು ಸ್ವಲ್ಪ ಮುಖ ಕಪ್ಪುಮಾಡಿ ನುಡಿದಳು.

"ನಾನು ಇನ್ನೊಬ್ಬರಿಗೆ ಸೀರೆ ತಂದು ಕೊಡುವಷ್ಟರ ಶಕ್ತನಲ್ಲ. ಮನೆಯಲ್ಲಿರುವ ಹೆಂಗಳೆಯರಿಗೆ ಸೀರೆ ತಂದು ಕೊಡಬೇಕೆಂಬ ಇಚ್ಛೆಯೂ ನನ್ನಲ್ಲಿಲ್ಲ. ಮತ್ತೂ ಒಂದು ಮಾತಿದೆ, ನೋಡು. ಒಂದು ಸೀರೆ ತಂದುಕೊಡುವುದೇನು ದೊಡ್ಡ ಸಂಗತಿಯಲ್ಲ. ಇಂದಿನವರೆಗೆ ನಾನು ನಿನ್ನ ಕೈಗೆ ಸಿಕ್ಕಿರಲಿಲ್ಲ. ಒಂದು ವೇಳೆ ಸಿಕ್ಕಿಕೊಂಡೆನೆಂದರೆ; ಮೊದಲು ಸೀರೆ, ಅ ಮೇಲೆ ರವಕೆ, ಮತ್ತೆ ರಿಬ್ಬನ್, ಪೌಡರ್, ಕ್ಲಿಪ್, ಲಿಪ್‌ಸ್ಟಿಕ್ ಕೂಡಾ ಆಗಬೇಕೋ ಏನೋ............!"

"ನೋಡು ಅಣ್ಣಾ, ನನಗೆ ತಮಾಷೆ ಮಾಡಬೇಡ. ಬೇರೆಯವ ರೆಲ್ಲ ಮುಂಬಯಿಯಿಂದ ಬರುವಾಗ್ಗೆ ಮಿಠಾಯಿ, ಅಂಗಿ, ಸೀರೆ ಮೊದಲಾದುವುಗಳನ್ನು ತರುತ್ತಾರಂತೆ. ನೀನು ತಂದುದನ್ನು ನಮಗೆಲ್ಲ ತಿಂದು ತಿಂದು ಸಾಕಾಯಿತು. ಸೀರೆಗಳನ್ನು ಉಟ್ಟು

ಉಟ್ಟು ಬೇಸರವಾಯಿತು. ಜಾಗ್ರತೆ, ನಿನ್ನ ವಿಚಾರ ಎಲ್ಲ ಗೊತ್ತು ನನಗೆ. ಈಗ ಮೂಗು ಮೇಲು ಮಾಡುತ್ತೀ" ಎಂದು ಮಹಾ ಯುದ್ಧವನ್ನು ಗೆದ್ದವಳಂತೆ ಗಂಭೀರದಿಂದ ಹೇಳಿದಳು.

"ಅದಕ್ಕಾಗಿಯೇ ನನ್ನ ಮದುವೆಯ ಮಾತಂತಿರಲಿ ಎಂದು ಅಂದದ್ದು ಆಗ್ಗೆ. ಈಗ ಗೊತ್ತಾಯಿತೇ ನಿನಗೆ. ಶಾಲೆ ಕಲಿತ ತಂಗಿಗೆ ಏನನ್ನೂ ತಂದು ಕೊಡದವ, ಮನೆಗೆ ಬಂದ ಹೆಂಡತಿಗೆ ಏನನ್ನಾದರೂ ತಂದು ಕೊಡಬಲ್ಲನೇ?"

"ಹಾಗಾದರೆ ನೀನು ನಿನ್ನ ಮದುವೆಯ ಸಮಯದಲ್ಲಿಯೂ ನನಗೆ ಏನನ್ನೂ ತಂದು ಕೊಡುವುದಿಲ್ಲವೇ?"

"ಮದುವೆ! ಯಾರಿಗೆ!! ನನಗೆ!!! ಹುಚ್ಚು ನಿನಗೆ. ಮದುವೆಯಾಗುವುದೇನೂ ದೊಡ್ಡ ಮಾತಲ್ಲ. ಬೇಕಾದರೆ ದೂರದೂರವಿದ್ದವರೂ ಹತ್ತಿರ ಬಂದು ನಾಲ್ಕು ದುಡ್ಡು ಸಾಲ ಕೊಡಬಹುದು. ಮಾಡಿದ ಸಾಲವನ್ನು ತೀರಿಸುವಾಗ್ಗೆ ಎಷ್ಟು ಪ್ರಯಾಸವಾಗುತ್ತದೆಂಬುದನ್ನು ನೀನು ಕೇಳಿದ್ದಿಲ್ಲವೇನು?"

"ಸಾಲಗೀಲ ನನಗೆ ಗೊತ್ತಿಲ್ಲ. ನಾನು ನಿನ್ನ ಮದುವೆಯ ವಿಷಯ ಮಾತಾಡುತ್ತಿರುವುದು".

"ಹೌದು, ಅದೆ. ಇದು ಮತ್ತೊಂದು ನಮೂನೆಯ ಋಣ. ಬಿಟ್ಟು ಬಿಡಲಾರದ ಕರುಳು ಕರಗಿಸುವ ಋಣವೆಂದು ಬಲ್ಲವರು ಹೇಳುತ್ತಾರೆ".

"ನಿನ್ನ ಮಾತು ನನಗೆ ಅರ್ಥವಾಗುವುದಿಲ್ಲ. ಮೊದಲು ಹೇಳು, ನಿನ್ನ ಮದುವೆಯ ದಿನ ನನಗೆ ಏನು ಇನಾಮು ಕೊಡುತ್ತೀ?"

"ಏನನ್ನು ಕೊಡಬೇಕೆಂದು ಇಂದಿನ ವರೆಗೂ ನಾನು ನಿಶ್ಚಯಿಸಿಲ್ಲ. ಏಕೆಂದರೆ, ನನ್ನ ಮದುವೆಯ ವಿಚಾರವನ್ನು ನಾನು ಸ್ವತಃ ಮಾಡಿಲ್ಲ. ನೀನು ವಿಚಾರ ಮಾಡಿರಬಹುದು. ಏಕಂದರೆ, ನಿನಗೆ ಇನಾಮು ಸಿಗಬಹುದಾದ ಆಲೋಚನೆ ತಲೆಗೇರಿ ಹೋಗಿದೆ. ಒಂದು ವೇಳೆ ನನ್ನ ಮದುವೆಯಾಗುವ ಸಂದರ್ಭ ಬಂದರೆ, ನಿನಗೆ ಏನು ಇನಾಮು ಕೊಡಬೇಕಾಗುವುದೆಂಬುದನ್ನು ಆವಾಗ್ಗೆ ಆಲೋಚಿಸಿ ಹೇಳಬಲ್ಲೆ"

"ಅದೆಲ್ಲ ಬೇಡ. ನೋಡು ಅಣ್ಣಾ, ನಾವು ಆವಾಗ್ಗಿನಿಂದ ಮಾತಾಡುತ್ತಿದ್ದೇವೆ. ತಾಯಿ ಮಾತಾಡುವುದಿಲ್ಲ. ಏಕೆ? ಅವಳಿಗೆ ಗೊತ್ತಿದೆ ನಿನ್ನ ಮದುವೆಯ ಮಾತು".

"ಅವಳಿಗೆ ಗೊತ್ತಿರುವುದು ನಿನಗೂ ಗೊತ್ತಿರಲೇ ಬೇಕು".

"ನನಗೇನೂ ಗೊತ್ತಿಲ್ಲ. ಹೋಗು ನೀನು".

"ಗೊತ್ತಿಲ್ಲದಿದ್ದರೆ ಹೋಗಲಿ. ಈಗ ಹೇಳು, ನಿನಗೆ ಏನುಬೇಕೆಂದು."

"ಏನನ್ನು ಕೊಡುತ್ತೀ? ನೀನೆ ಹೇಳು ಈಗ".

"ಏನನ್ನು ಕೊಡಬೇಕು?"

"ಒಂದು ಜೋಡಿ ಸೀರೆ".

"ಅದೇನು ದೊಡ್ಡ ಸಂಗತಿಯಲ್ಲ".

ಆಗ ಲಲಿತೆಯು ತನ್ನ ಕೈ ಮೈಯನ್ನೆಲ್ಲ ನೋಡಿಕೊಂಡು—

"ಮತ್ತೇನು ತಂದು ಕೊಡುತ್ತೀ? ಕೈಯ ಬಳೆ, ಕಿವಿಯ ಬೆಂಡೋಲೆಯನ್ನು ತಂದುಕೊಡುತ್ತೀಯೇನು?"

"ಯಾಕೆ ತಂದು ಕೊಡಬಾರದು? ಸೀರೆಯನ್ನಾದರೋ ನಾಲ್ಕು ದಿನ ಉಟ್ಟುಕೊಂಡು ನೀನು ಅದನ್ನು ಮೂಲೆಗೆ ಹಾಕಿಬಿಡಬಹುದು. ಆಭರಣವನ್ನು ಮೂಲೆಗೆ ಹಾಕಲು ಸಾಧ್ಯವಿದೆಯೇನು?"

"ನೀನು ಆಭರಣವನ್ನು ಮಾಡಿಸಿ ಹಾಕಿದರೆ, ನಮ್ಮ ತೋಟದಲ್ಲಿರುವ ಗಿಡಗಳಲ್ಲಾಗುವ ಹೂಗಳೆಲ್ಲ ಬಂಗಾರದವುಗಳಾಗಬಹುದು. ನನಗೆ ಏನನ್ನಾದರೂ ಆಭರಣಗಳನ್ನು ಮಾಡಿಸಿ ಹಾಕುವುದನ್ನು ದೂರವಿಡು. ಮೊದಲು ಹೇಳು, ನಿನ್ನ ಮೈ ಕೈಯಲ್ಲಿಡಲು ಏನನ್ನಾದರೂ ಮಾಡಿಸಿಕೊಂಡಿರುವಿಯಾ?"

ಎಂದು ಮಲ್ಲಯುದ್ಧದಲ್ಲಿ ಗೆದ್ದುಬಂದ ಜಟ್ಟಿಯಂತೆ ಎದೆಯುಬ್ಬಿಸಿಕೊಂಡಳು. ಈ ಮಾತಿನಿಂದ ಲಲಿತೆಯು ಎಷ್ಟು ಅಭಿಮಾನಪಟ್ಟುಕೊಂಡಳೋ ಅಷ್ಟೆ ರಮೇಶನು ತಗ್ಗಿದನು. ಅಧ್ಯಾಪಕನ ಪ್ರಶ್ನೆಗೆ ಉತ್ತರ ಕೊಡಲಾರದ ವಿದ್ಯಾರ್ಥಿಯಂತೆ ತತ್ತರಿಸಿದನು. ಕಡೆಗೆ ಮುಖವನ್ನು ಮುಚ್ಚಿಕೊಂಡು, ಸಮಾಧಿಯಿಂದ ಎದ್ದುಬಂದ ಯೋಗಿಯಂತೆ ಗಂಭೀರವಾಗಿ ತೇಜಸ್ಸು ಬೀರಿದನು. ಆಗ್ಗೆ ಮುಖದಲ್ಲಿ ತೆಳುನಗುವೊಂದು ಮೂಡಿ ತೇಲಿತು. ಅವನು ಮೆಲ್ಲನೆ ಹೇಳಿದ,

"ಗಿಡಗಳಲ್ಲಿರುವ ಹೂ ಎಂದಿಗೂ ಬಂಗಾರವಾಗಲಾರದೆಂಬುದು ನಿಜ. ಆದರೆ ಬದುಕಿರುವ ಮನುಷ್ಯನು ಬದುಕಿನಲ್ಲಿ ಏನನ್ನೂ ಮಾಡಲಾರನು ಎಂಬುದನ್ನು ನಾನು ಒಪ್ಪುವುದಿಲ್ಲ. ಯಾವ ಪ್ರಯೋಜನಕ್ಕೂ ಬೀಳದವನು ಸಂದರ್ಭದಲ್ಲಿ ಯಾರಿಂದಲೂ ಆಗ ಲಾರದ ಕಾರ್ಯದ ಸಲುವಾಗಿ ಬೇಕಾಗುತ್ತಾನೆ. ಒಮ್ಮೊಮ್ಮೆ ಯಾವ ಬುದ್ಧಿವಂತನ ವಿಚಾರದಲ್ಲಿ ಹುಟ್ಟ ಬರಲಾರದ ವಿಷಯ ಸಾಮಾನ್ಯ ದಾರಿಹೋಕನ ಬಾಯಿಮಾತಾಗಿರುತ್ತದೆ. ಪ್ರತಿ ಯೊಬ್ಬರಲ್ಲಿಯೂ ಒಂದು ರೀತಿಯ ಅಭಿಲಾಷೆಯಿರುತ್ತದೆ. ನನ್ನಲ್ಲಿಯೂ ಒಂದು ರೀತಿಯ ಆಶೆಯಿರಬಹುದೆಂಬುದನ್ನು ನೀನು ಒಪ್ಪಬೇಕಾದೀತು. ತನ್ನ ಜನರಿಗೆ ತನ್ನಿಂದ ಬಹಳ ಉಪಕಾರವಾಗ ಬೇಕೆಂದು ಬಹಳ ಜನರು ಆಶಿಸುತ್ತಾರೆ. ಆಶಿಸಿದಂತೆ ದೈವಗೆಟ್ಟು ನೀತಿತೊರೆದು ಧರ್ಮ ಬಿಟ್ಟು ಸಾಧಿಸುತ್ತಾರೆ. ನನ್ನಿಂದ ಅಂಥಾ ಕೆಲಸಗಳಾಬಹುದೆಂದು ನಾನು ಹೇಳಲಾರೆ. ನನ್ನಿಂದಾಗಿ ಇನ್ನೊ ಬ್ಬರಿಗೆ ಪ್ರಯೋಜನವಾಗಬೇಕೆಂಬ ಇಚ್ಛೆ ನನ್ನಲ್ಲಿ ಬಹಳವಿದೆ. ಅದು ಎಂದಿನ ವರೆಗೆ ಸಾಧ್ಯ ಎಂಬುದು ಮಾತ್ರ ನನಗೆ ಗೊತ್ತಿಲ್ಲ. ಕೇಳು, ಲಲಿತಾ, ನನ್ನ ಈ ಮಾತನ್ನು ನೀನು ಚೆನ್ನಾಗಿ ನೆನಪಿ ನಲ್ಲಿಡು. ನನ್ನಿಂದ ಇನ್ನೊಬ್ಬರಿಗೆ ಏನೊಂದು ಉಪಕಾರವಾಗದೆ ಹೋಗಬಹುದು. ಆದರೆ ನನ್ನಿಂದಾಗಿ ಯಾರಿಗೂ ಎಳ್ಳಷ್ಟೂ ಅಪ ಕಾರವಾಗಬಾರದೆಂಬುದೇ ನನ್ನ ಹಿರಿಯಾಸೆ. ನನಗಾಗಿ ಇನ್ನೊ ಬ್ಬರ ಹಾನಿಯಾಗುವುದನ್ನು ನಾನು ನೋಡಬಯಸುವುದಿಲ್ಲ" ಎಂದು ಹೇಳುತ್ತಿದ್ದಾಗ ಲಲಿತೆಯು ನಡುವೆ ಬಾಯಿಹಾಕಿ,

"ನನಗೆ ನಿನ್ನ ಲೆಕ್ಚರ್ ಬೇಡ. ನನ್ನ ಮಾತಿಗೆ ಉತ್ತರ ಕೊಡುವು ದಾದರೆ ಕೊಡು ನೀನು ಆಭರಣಗಳನ್ನು ಮಾಡಿಸಿ ಹಾಕುತ್ತೀ ಎಂದೆಲ್ಲ ನಾನು ಸೀರೆ ಉಡಲು ಪ್ರಾರಂಭಿಸಿದುದು" ಎಂದು ಅಣಕಿಸಿ ನುಡಿದಳು.

"ಪ್ರಾಯಕ್ಕೆ ಬಂದಾಗ್ಗೆ ಸೀರೆ ಉಡಲೇ ಬೇಕಾಗುತ್ತದೆ. ಲಲಿತಾ, ನಿನ್ನ ಮಾತಿಗೆ ಉತ್ತರ ಕೊಡದೆ ಇರುವುದಿಲ್ಲ. ನಾನು ಆಭ ರಣಗಳನ್ನು ಮಾಡಿಸಿ ಕೊಡದಿದ್ದರೂ ತಾಯಿತಂದೆಯರು

ನಿನ್ನನ್ನು ಹಾಗೆ ಇರಲು ಬಿಡಲಾರರು. ಪ್ರಾಯಕ್ಕೆ ಬಂದಿರುವ ಹೆಣ್ಮಕ್ಕಳನ್ನು ಸಾಕುವ ರೀತಿಯನ್ನು ಅವರು ಚೆನ್ನಾಗಿ ತಿಳಿದಿರುವರು. ಅವರು ತಿಳಿದವರೆಂದು ಅವರು ಮಾಡಿಟ್ಟಿರುವ ಆಸ್ತಿಪಾಸ್ತಿಯನ್ನು ನಾವು ನಮ್ಮ ಇಚ್ಛೆಯಂತೆ ಉಪಯೋಗಿಸಬಹುದೆಂದಲ್ಲ. ಅವರು ಈ ಆಸ್ತಿಪಾಸ್ತಿ ಮನೆಯನ್ನು ಯಾಕೆ ಮಾಡಿದ್ದಾರೆಂಬುದು ನನಗೆ ತಿಳಿದಿಲ್ಲ. ಬಹುಶಃ ನೀನು ತಿಳಿದಿರಬಹುದು. ಇದು ಮಾತ್ರ ಖಂಡಿತ, ನಾನು ನನಗಾಗಿ ನನ್ನ ಸ್ವಂತ ವಿಚಾರದಿಂದ ನಮ್ಮೆಲ್ಲರದಾಗಿರುವ ಈ ಮನೆಯ ಒಂದು ಚಿಕ್ಕಾಸನ್ನೂ ಹಾಳು ಮಾಡಲಾರೆ. ಈಗ ನೀನು ತಿಳಿಯಬಹುದು, ದುಡಿದು ಗಳಿಸಲಾರದ ಈ ಅಣ್ಣನು ನಿನಗೇನನ್ನು ಮಾಡಿಸಿ ಹಾಕಬಹುದೆಂದು. ನನ್ನ ಮದುವೆಯ ವಿಷಯ ನಿನಗೆ ಗೊತ್ತಿದೆ· ನಾನು ತಿಳಿದಿರುವುದಕ್ಕಿಂತಲೂ ಹೆಚ್ಚಿಗೆ ನೀನು ತಿಳಿದಿರುವಿ. ಮುಂಬಯಿಯಿಂದ ಹೊರಡುವಾಗಲೆ ನಾನು ತಿಳಿದಿರುವೆ, ನನ್ನನ್ನು ಊರಿಗೆ ಕರೆದುಕೊಂಡು ಬರುವುದರಲ್ಲಿ ಮದುವೆಯ ವಿಷಯವೂ ಸೇರಿರುವುದೆಂದು. ನನ್ನಿಂದ ನಿನಗೆ ಏನನ್ನೂ ಮಾಡಿಸಿ ಹಾಕಲು ಸಾಧ್ಯವಾಗದೆ ಹೋಗಬಹುದು. ಅದಕ್ಕಾಗಿ ನನ್ನ ಮದುವೆಯ ದಿನ ನನಗೆ ಸಿಗಬಹುದಾದ ಇನಾಮುಗಳಲ್ಲಿ ಎಲ್ಲವನ್ನೂ ನಿನಗೆ ಕೊಡುತ್ತೇನೆ. ಅದನ್ನಾದರೂ ನಾನು ಕೊಟ್ಟುದುದೆಂದು ತಿಳಿದು ನೀನು ಸಮಾಧಾನ ಹೊಂದುವಿ ಎಂದು ನಂಬುತ್ತೇನೆ" ಎಂದು ರಮೇಶ ಮಾತು ಮುಗಿಸಿದಾಗ ಲಲಿತೆಯು ಆನಂದಿತಳಾಗಿ ಕುಣಿಯುತ್ತಾ ಅಂಗಳದಲ್ಲಿ ಓಡಾಡಿದವಳು ಎದುರಿಗೆ ಕಂಬದಂತೆ ನಿಂತಿರುವ ತಂದೆಯನ್ನು ಕಂಡು ಅವಾಕ್ಕಾದಳು. ಸೀತಕ್ಕನ ಮನಸ್ಸು ಎತ್ತಲೋ ಸಾಗಿತ್ತು. ಕಣ್ಣುಗಳಲ್ಲಿ ನೀರಿನ ಹನಿಗಳು ಉದುರುತ್ತಿದ್ದುವು.

ಸಂಕಣ್ಣ ಊಟ ಮಾಡುತ್ತಿದ್ದಾಗ ಸೀತಕ್ಕ ಬಂದು ಅವರ ಬದಿಯಲ್ಲಿ ನೆಟ್ಟಗೆ ಕುಳಿತುಕೊಂಡಳು. ರಮೇಶನು ಕೂಡಾ ಅವರ ಬದಿಯಲ್ಲಿಯೇ ಕುಳಿತುಕೊಂಡು ಉಣ್ಣುತ್ತಿದ್ದ. ಯಾರೂ ಮಾತನಾಡುತ್ತಿದ್ದಿಲ್ಲ. ಆಗಿನ ಮೌನವನ್ನು ಮುರಿಯುತ್ತಾ ಸೀತಕ್ಕ "ಹೂಂ" ಅಂಥಾ ತುಸು ಸ್ವರ ಎಳೆದು,

"ಹೋಗಿದ್ದ ಕಾರ್ಯ ಏನಾಯಿತು?" ಎಂದು ಕೇಳಿದಳು. ಅದಕ್ಕೆ ಸಂಕಣ್ಣನು ಮೊದಲು ಏನನ್ನೂ ಹೇಳಲಿಲ್ಲ. ಮುಖವೆತ್ತಿ ಒಮ್ಮೆ ಹೆಂಡತಿಯನ್ನು ಮತ್ತೊಮ್ಮೆ ತನ್ನ ಮುಂದಿನ ಹಕ್ಕುದಾರನನ್ನು ನೋಡಿ, ಎರಡು ತುತ್ತು ಉಂಡು,

"ಏನು ಕಾರ್ಯ?" ಎಂದು ಮರುತ್ತರ ಕೊಟ್ಟರು.

"ಮೂಲ್ಕಿಗೆ ಹೋದುದು" ಎಂದು ಸೀತಕ್ಕ ಯಜಮಾನರ ಹಾವ ಭಾವವನ್ನು ತಿಳಿಯದೆ ತಕ್ಷಣ ನುಡಿದಳು.

"ಅದರಲ್ಲೇನಿದೆ ಆಗುವುದು? ಆಗದಿರುವುದು? ಹುಡುಗಿಗೆ ಸ್ವಲ್ಪ ಪ್ರಾಯ ಹೆಚ್ಚಾಗುತ್ತದೋ ಎಂದು ಅನುಮಾನಿಸುತ್ತಿದ್ದೆ".

"ಎಷ್ಟು ಪ್ರಾಯವಂತೆ! ಹಾಗೇನು ಮೈನೆರೆದು ಏಳೆಂಟು ವರುಷ ಗಳಾಗಿರುವುದೋ?"

"ಇಲ್ಲ, ಇಲ್ಲ. ಕಳೆದ ಬೇಸಿಗೆಯಲ್ಲಿಯೇ ಮೆಟ್ರಿಕ್ಕು ಪಾಸಾಗಿರು ವುದು. ಹದಿನೆಂಟು ವರುಷ ತುಂಬಿ ಈಗ ಹತ್ತೊಂಭತ್ತು ನಡೆ ಯುತ್ತಿರುವುದು".

"ಹಾಗಾದರೆ ಎರಡು ಮೂರು ವರುಷದ ಮಾತು. ಹಾಂ, ಹುಡುಗಿ ನೋಡಲು ಹೇಗಿದ್ದಾಳೆ?"

"ಚೆನ್ನಾಗಿದ್ದಾಳೆ. ಅದಕ್ಕೇನು ಬೆಲೆ ಕಟ್ಟಬೇಕೆಂದಿಲ್ಲ".

"ಗುಣ ಹೇಗಿದೆಯಂತೆ?"

"ಅದೇ ಮಾತು. ಅದು ಗೊತ್ತಾಗಿಲ್ಲ ನನಗೆ. ನೋಡುವ ಮಟ್ಟಿಗೆ ಹೇಳಲು ಬರುವುದಿಲ್ಲ. ಶಾಲೆಯ ಹುಡುಗಿಯಾದುದ ರಿಂದ ಬಾಯಿ ದೊಡ್ಡದಾಗಿದ್ದು ಮಾತು ಬಿಗಿಯಾಗಿರಬಹುದು ಸಹಜ. ಅದಕ್ಕೆ ನಾವು ಕೂಡಾ ತುಸು ಜಾಗ್ರತೆಯಿಂದಿರಬೇಕು".

"ಮದುವೆಯಲ್ಲಿಡುವ ಉಡುಗೊರೆಯ ಕುರಿತು ಮಾತಾಡಿರು ವಿರೋ ಅಥವಾ ಅವರವರಿಗೆ ಬೇಕಾದಂತೆ ಮಾಡುವುದೋ?"

"ಈ ವಿಷಯಕ್ಕೆ ನಿನ್ನದೇನು ಆಲೋಚನೆ?"

"ಹಾಗಲ್ಲ. ಅವರೇನು ನಮಗಿಂತ ಕಡಮೆ ದರ್ಜೆಯವರಲ್ಲ. ಹೊರ ಗಿನ ವಹಿವಾಟು ಅಲ್ಲದೆ ದೊಡ್ಡ ಭೂಮಿ ಆಸ್ತಿಯಿದೆಯೆಂದೂ ಕೆಲವು ಮುಡಿ ಅಕ್ಕಿ ಗೇಣಿ ಬರುತ್ತದೆಂದೂ ನೀವೇ ಹೇಳುತ್ತಿದ್ದು ದನ್ನು ಕೇಳಿದ್ದೆ".

"ಹಾಗೆ ಒಂದು ಐನೂರು ಒಂದು ಸಾವಿರ ರೂಪಾಯಿ ಬೆಲೆ ಬಾಳುವ ಉಡುಗೊರೆಯನ್ನವರು ಮಾಡದೆ ಇರುತ್ತಾರೆ ಏನು?"

"ಅವರು ಅಷ್ಟು ಮಾಡುವಾಗ್ಗೆ, ನಾವು ಎರಡು ಪವನಿನ ಕಂಠಿ ಮಣಿ ನೂರೈವತ್ತು ರೂಪಾಯಿಯ ಸೀರೆ ರವಕೆಯನ್ನು ಕೊಡುವುದು ಸಾಲಬಹುದೇನು?"

"ಅದೇನು ನನಗೆ ದೊಡ್ಡದೆಂದು ಕಾಣುವುದಿಲ್ಲ. ನಿಬ್ಬಣಿಗರಾಗಿ ಬರುವವರನ್ನು ಅವರಿಗೆ ತಕ್ಕಂತೆ ಮರ್ಯಾದೆಯಿಂದ ಸತ್ಕರಿಸುವ ಆಲೋಚನೆ ಮೊದಲು. ಬೇಕಾದರೆ ನಾಲ್ಕು ಪವನಿನ ನಾಲ್ಕು ಬಳೆಗಳನ್ನು ಮಾಡಿಸಿ ಹಾಕುವುದು. ಅದರಲ್ಲೇನು? ಆದರೆ..."

"ಆದರೆ ಏನು, ಏನಾದರೂ ವರದಕ್ಷಿಣೆಯ ಪ್ರಸ್ತಾಪ ಎತ್ತಿರುವಿರೋ?"

"ಅದನ್ನು ನಾನೇಕೆ ಪ್ರಸ್ತಾಪಿಸುತ್ತೇನೆ. ಒಂದು ವೇಳೆ ಅವರು ಅವರಿಚ್ಛೆಯಿಂದ ಕೊಡುವುದಾದರೆ, ತೆಗೆದು ಕೊಳ್ಳದೆ ಇರಲಿಕ್ಕಾಗುತ್ತದೋ?"

"ನೀವು ಏನು ಬೇಕಾದರೂ ತಿಳಿದುಕೊಳ್ಳಿರಿ. ಅಂಥಾ ವಿಷಯಗಳ ಮೇಲೆ ನನಗೆ ಸ್ವಲ್ಪವೂ ಮನಸ್ಸಿಲ್ಲ. ವರದಕ್ಷಿಣೆಗೆ ಕೈನೀಡಿದರೆ, ಎರಡು ಮನೆತನಗಳ ಸಂಬಂಧದ ನಡುವೆ ಎಲ್ಲಿಯೂ ಇಲ್ಲದ ಒಂದು ನಿಷ್ಠುರ ಬಂದು ಸೇರಿಹೋಗುತ್ತದೆ. ನಮ್ಮೊಳಗಿನ ಸಂಬಂಧ ದುಡ್ಡಿಗಾಗಿ ಆಗಿರುವುದೆಂಬ ಕಲ್ಪನೆ ಉಳಿದು ಬಿಡುತ್ತದೆ. ಅದಕ್ಕಾಗಿ ಹಿರಿಯ ಮಗನ ಮದುವೆಯಲ್ಲಿ ಅಂಥದ್ದೇನು ಬೇಡವಾದ ಸಂಗತಿ ಬರುವಂತೆ ಮಾಡಬೇಡಿರಿ. ದೇವರ ದಯೆಯಿಂದ ನಮಗೇನು ಕಡಮೆಯಿದೆ! ನಾವೇನು ಹೋಗುವಾಗ್ಗೆ ಕೊಂಡು ಹೋಗುತ್ತೇವೋ? ವಿದ್ಯಾಬುದ್ಧಿ ಕಲಿಸಿ ಎಲ್ಲರಂತೆ ಮಕ್ಕಳನ್ನು ಇಡುವುದು. ಮತ್ತೆ ದೇವರಿದ್ದಾನೆ..."

"ಅದೆಲ್ಲ ಇರಲಿ. ಬಿಡು ಆ ಮಾತನ್ನು. ಇನ್ನೊಮ್ಮೆ ಮಾತಾಡಿ ನೋಡಬಹುದು".

ಅಷ್ಟರಲ್ಲಿ ಉಂಡು ಮುಗಿದುದರಿಂದ ರಮೇಶನು ಏಳಲು ಆಲೋಚನೆ ಮಾಡುತ್ತಿದ್ದನು. ಅದನ್ನು ಕಂಡು ಸಂಕಣ್ಣ,

"ನೋಡು, ನಾವು ಮಾತಾಡಿರುವುದನ್ನು ನೀನು ತಿಳಿದಿರಬಹುದು. ಮೂಲ್ಕಿಯ ಸಾಹುಕಾರ ನಾರಾಯಣರಾಯರ ತಂಗಿ ತುಳಸಿಯನ್ನು ನಿನ್ನ ತಾಯಿಯ ಒಪ್ಪಿಗೆ ಮೇರೆಗೆ ನಿಶ್ಚಯಿಸಿ ಬಂದಿರುವೆನು. ಈ ತಿಂಗಳು ಮುಗಿಯುವವೊದಲೇ ಮದುವೆಯ ಕಾರ್ಯವನ್ನು ಮುಗಿಸಿಬಿಡಬೇಕೆಂಬ ಆಲೋಚನೆ ಮಾಡಿರುವೆವು". ಎಂದನ್ನಲು, ರಮೇಶ ಎದ್ದು ಹೊರಗೆ ಮುಖ ತೊಳೆಯಲು ನಡೆದನು.

ಈ ಕಾರ್ಯಕ್ಕೆ ರಮೇಶನ ಒಪ್ಪಿಗೆಯೇ ಎಂಬುದನ್ನು ಖಂಡಿತ ಮಾಡಿಕೊಳ್ಳಲು ಅದೇ ಕ್ಷಣದಲ್ಲಿ ಅವರಿಂದಾಗಲಿಲ್ಲ. ಆದರೆ ಅಲ್ಲಿಯೇ ಹತ್ತಿರದಲ್ಲಿ ಗೋಡೆಗೆ ಒರಗಿ ನಿಂತಿದ್ದ ಲಲಿತೆಯ ಮುಖದಲ್ಲಿ ಆನಂದವು ಅತಿರೇಕವಾಗಿ ಉದುರುತ್ತಲಿತ್ತು. ಅಣ್ಣನ ಮದುವೆಯಲ್ಲಿ ಅತ್ಯಧಿಕವಾಗಿ ಓಕುಳಿಗೈಯಬಹುದೆಂಬುದೇ ಅವಳ ಆನಂದದ ಕಾರಣ. ತುಸು ಹೊತ್ತಿನಲ್ಲಿ ಸಂಕಣ್ಣನವರೂ ಊಟ ಮುಗಿಸಿ ಬಂದವರು ಚಾವಡಿಯಲ್ಲಿ ವೀಳ್ಯ ಹಾಕತೊಡಗಿದರು. ಸೀತಕ್ಕನೂ ಅಡಿಗೆ ಮನೆಯಿಂದ ಹೊರಗೆ ಬಂದವಳು ಗಂಡನ ಎದುರಿಗೇನೇ ಕುಳಿತುಕೊಂಡಳು. ತನ ಒಪ್ಪಿಗೆಯನ್ನು ಪಡೆಯಲು ಒಟ್ಟಾದ ಈ ಸಣ್ಣ ಸಭೆಯಿಂದ ಹೇಗೆ ಜಾರಿ ದೂರವಾಗುವುದೆಂಬುದು ರಮೇಶನಿಗೆ ತಿಳಿಯಲಿಲ್ಲ. ಅವನೇನು ಈ ವೊದಲು ಊಟ ಮುಗಿಸಿದಾಗಲೆ ಹೊರಗೆ ಹೊರಡುವ ಅಭ್ಯಾಸವನ್ನು ಇಟ್ಟುಕೊಂಡಿಲ್ಲ. ಆದರಿಂದಾಗಿ ಈ ಸಂದರ್ಭವನ್ನು ತಪ್ಪಿಸಿಕೊಳ್ಳಲು ಅವನಿಂದಾಗಲಿಲ್ಲ. ಸಂಕಣ್ಣ ಕರೆದಾಗ ಮೆಲ್ಲನೆ ಹೋಗಿ ಅವರ ಬದಿಯಲ್ಲಿ ನಿಂತು ಕೊಂಡನು.

"ನೀನು ಏನು, ಏನನ್ನೂ ಹೇಳಲಿಲ್ಲ. ಏನು ನಿನ್ನ ಆಲೋಚನೆ?" ಎಂಬುದಾಗಿ ಮಾತು ಆರಂಭಿಸಿದರು.

"ಮದುವೆಯ ಮಾತನ್ನು ನಿಶ್ಚಯಿಸಿ ಬಂದಿರುವೆನೆಂದು ಸ್ವತಃ ನೀವಾಗಿಯೇ ಹೇಳುತ್ತಿರುವಾಗ ಇನ್ನು ನಾನು ಏನನ್ನುಹೇಳಲಿದೆ".

"ಅಲ್ಲS, ನಾಳೆ ಹೇಳಬಾರದು. ನನ್ನೊಡನೆ ಕೇಳದೆ ಹೆಣ್ಣು ನೋಡಿರುವರೆಂದು. ಸುಮ್ಮಸುಮ್ಮಗೆ ಅಪವಾದ ಬರುವುದೆಂದರೆ ಮನಸ್ಸಿಗೆ ತುಂಬಾ ಬೇಸರವಾಗುತ್ತದೆ".

"ನೀವು ಹಾಗೆ ತಿಳಿದು ಕೊಳ್ಳುವುದಾದರೆ ನನ್ನದೇನು ಅಡ್ಡಿಯಿಲ್ಲ.

ಯಾರ ಮೇಲೆಯೂ ಅಪವಾದ ಹೊರಿಸಬೇಕೆಂದು ನಾನು ಆಶೆ ಪಡುವುದಿಲ್ಲ. ನಿಮ್ಮ ವ್ಯವಹಾರವೇ ನಿಮಗೆ ಅಪವಾದ ಬರಬಹುದೆಂಬ ನಂಬಿಗೆ ಹುಟ್ಟಿಸುವುದಾದರೆ ನನ್ನಿಂದ ಏನು ಮಾಡಲು ಸಾಧ್ಯವಿದೆ?"

"ಈಗಿನ ಹುಡುಗರಿಗೆ ಅವರು ನೋಡಿದ ಹೆಣ್ಣೇ ಚಂದ. ಅದಕ್ಕಾಗಿ ಹಾಗೆ ಹೇಳಬೇಕಾಯಿತು".

"ಹೆತ್ತವರು ಮಾಡುವುದನ್ನು ಚಂದವೆಂದು ತಿಳಿಯುವವರೂ ಇದ್ದಾರೆ. ತಿಳಿಯದವರೂ ಇದ್ದಾರೆ. ಅದಕ್ಕೇನು ಮಾಡಲು ಸಾಧ್ಯವಿದೆ? ಮಕ್ಕಳ ಆಶೆ ಆಕಾಂಕ್ಷೆ, ಮತ್ತು ಅಭಿವೃದ್ಧಿಯನ್ನು ತೊರೆದೂ ಕೆಲವು ಕಡೆ ಹೆತ್ತವರು ತಮ್ಮ ಸ್ವಂತ ವಿಚಾರದಂತೆ ವರ್ತಿಸಿರುವ ಅದೆಷ್ಟೋ ದೃಷ್ಟಾಂತಗಳಿವೆ. ಅದರಿಂದಾಗಿ ಹೆತ್ತವರ ಮೇಲೆ ಅಂಥಾ ಅಪವಾದ ಬೀಳುತ್ತಿರಬಹುದು. ನನ್ನ ಮಟ್ಟಿಗೆ ನಾನು ಹೇಳುವುದಾದರೆ ನೀವು ನನ್ನ ಕೆಡುಕನ್ನು ಬಗೆದು ಏನನ್ನೂ ಮಾಡುತ್ತಿರುವುದಿಲ್ಲವೆಂದು."

ರಮೇಶನ ಈ ನಿರ್ದಾಕ್ಷಿಣ್ಯ ನಿರಾಡಂಬರದ ಮಾತಿಗೆ ಯಾರೂ ಉತ್ತರ ಕೊಡಲಿಲ್ಲ. ರಮೇಶ ಮೆಲ್ಲನೆ ಎದ್ದು ಹೊರಗೆ ಹೋದನು.

* * * * *

ಮೂಲ್ಕಿಯ ಸಾಹುಕಾರ ನಾರಾಯಣರಾಯರ ಪರಿಚಯ ಬಹುತರವಾಗಿ ಜಿಲ್ಲೆಯ ಎಲ್ಲಾ ಸಣ್ಣ ದೊಡ್ಡ ಸಾಹುಕಾರರಿಗೂ ಇದೆ. ಅದಕ್ಕೆ ಮುಖ್ಯ ಕಾರಣವೇನಂದರೆ, ಸಾಹುಕಾರ ನಾರಾಯಣರಾಯರು ಕೊಂಡು ಕೊಳ್ಳುವ ಯಾವ ವ್ಯಾಪಾರವನ್ನೇ ಮಾಡಲಿ ಅಥವಾ ಎಂಥಾ ವಹಿವಾಟವನ್ನೇ ನಡೆಸಲಿ ತಾನು ಹಿಡಿದ ವ್ಯಾಪಾರದಲ್ಲಿ ತನಗೆ ನಾಲ್ಕು ಕಾಸು ಲಾಭವಾಗುವಂತೆ ತನ್ನಿಂದ ಕೊಂಡುಕೊಳ್ಳುವವರಿಗೂ ಅಥವಾ ತನ್ನ ಜತೆ ವ್ಯವಹಾರ ನಡೆಸುವವರಿಗೂ ನಾಲ್ಕು ಕಾಸು ಲಾಭ ಸಿಗಬೇಕು ಎಂಬ ಉದಾರ ಗುಣವೇ ಅವರನ್ನು ಹೆಚ್ಚಾಗಿ ಜನರು ಹೊಗಳುತ್ತಿರಲು ಕಾರಣವಾಗಿರಬಹುದು. ಈ ಉದಾರ ಗುಣವನ್ನು ಅವರಲ್ಲಿ ವ್ಯಾಪಾರ ವಹಿವಾಟು ನಡೆಸುವ ಪ್ರತಿಯೊಬ್ಬರೂ ತಿಳಿದಿರುವರು. ನಾರಾಯಣರಾಯರ ದೊಡ್ಡ ಸಂಸಾರ. ಅಂಗಡಿ ಹೇಗೂ ಇದೆ. ಹಿತ್ತಿಲು, ತೋಟ, ಗದ್ದೆ, ಮನೆ ಇದೆ. ಹತ್ತು ಜನರ ಸಮ್ಮುಖದಲ್ಲಿ ಹತ್ತು ವಿಷಯವನ್ನು

ವಿವರವಾಗಿ ಹೇಳುವಷ್ಟು ಜಾಣ್ಮೆಯೂ ಇದೆ. ಅವರು ಅವರ ಬುದ್ಧಿಸಾಧನೆ ಯಲ್ಲಿ ಹೆಚ್ಚಾಗಿ ಏನೂ ಮಾಡಿದುದು ಕಾಣುವುದಿಲ್ಲ ನಿಜ. ಆದರೆ ಹಿರಿಯರಿಂದ ಒದಗಿ ಬಂದ ಆಸ್ತಿ ಸೊತ್ತುಗಳಲ್ಲಿ ಸ್ವಲ್ಪವನ್ನೂ ಅವರು ಹಾಳು ಮಾಡಲಿಲ್ಲ. ಸಮಾಜದಲ್ಲಿ ನಾರಾಯಣರಾಯರಷ್ಟು ಸಣ್ಣ ಪ್ರಾಯದಲ್ಲಿ ಈ ಮೊದಲು ಯಾರೂ ಅವರ ಕುಟುಂಬದಲ್ಲಿ ಗೌರವಿಸಲ್ಪಟ್ಟಿರಲಿಲ್ಲ. ಅವರ ಆಧುನಿಕ ವ್ಯವಹಾರವು ಹಿರಿಯರ ಹೆಸರಿಗೆ ಕಳಸವಿಟ್ಟಂತಾಗಿತ್ತು. ಅಲ್ಲದೆ ದಿನದಿನಕ್ಕೆ ಬೆಳೆಯುತ್ತಿದ್ದ ಕುಟುಂಬ ಪರಿವಾರದಲ್ಲಿ ಏನೊಂದು ತೊಂದರೆ ತಕರಾರುಗಳೇ ಳದಂತೆ ಜಾಗ್ರತೆಯಿಂದ ಮನೆವಾರ್ತೆಯನ್ನು ತೂಗಿಸಿಕೊಂಡು ಬರುವುದೂ ಚೆನ್ನಾಗಿತ್ತು. ಅವರ ಮನೆಯ ಹೆಣ್ಮಕ್ಕಳಲ್ಲಿ ತುಳಸಿಯೊಬ್ಬಳೇ ಮೆಟ್ರಿಕು ಮುಗಿಸಿದ್ದಳು. ಅಲ್ಲದೆ ಅವಳೆಷ್ಟು ರೂಪವತಿಯೋ ಅಷ್ಟೇ ತೀಕ್ಷ್ಣವತಿಯೂ ಆಗಿದ್ದಳು. ಸಾಹುಕಾರರಿಗೆ ಅವಳ ಮೇಲೆ ಬಹಳ ಪ್ರೀತಿ. ನಾರಾಯಣ ರಾಯರ ಮದುವೆಯಾಗಿ ಇಂದಿಗೆ ಐದಾರು ವರುಷಗಳಾಗಿದ್ದವು. ಎರಡು ಮಕ್ಕಳೂ ಇವೆ. ತುಳಸಿ ಚಿಕ್ಕಂದಿನಲ್ಲಿಯೇ ಓಡಾಡುವುದರಲ್ಲಿ ಬಹಳ ಚುರು ಕಾಗಿದ್ದಂತೆ ಪಾಠ ಕಲಿಯುವುದರಲ್ಲಿಯೂ ಜಾಣೆಯಾಗಿದ್ದಳು. ಹಾಗೆಯೇ ಅವಳನ್ನು ಮುಂದಕ್ಕೆ ಕಾಲೇಜು ಓದಿಸಬೇಕೆಂದು ನಾರಾಯಣರಾಯರು ಬಗೆ ದಿದ್ದರು. ಆದರೆ ಹೆತ್ತ ತಾಯಿ ಅದಕ್ಕೆ ಒಪ್ಪಿಗೆ ಕೊಡಲಿಲ್ಲ. ಹೆಣ್ಣು ಯಾರೇ ಆಗಲಿ, ಯಾವ ಕುಲದಲ್ಲಿಯೇ ಹುಟ್ಟಲಿ, ಪ್ರಾಪ್ತ ವಯಸ್ಸಿನಲ್ಲಿ ಮದುವೆ ಯಾಗಿ ಸಂಸಾರ ಸೇರುವುದು ಧರ್ಮವಾಗಿದೆ. ಅಲ್ಲದೆ ಸಮಾಜ ಪೋಷಕ ವಾಗಿದೆ. ಹೆಣ್ಣಿನ ಬದುಕು ಹೊತ್ತು ಹೆತ್ತು ತಾಯಿಯಾಗುವುದರಲ್ಲಿಯೇ ಪುನೀತವಾಗುವುದೆಂಬುದನ್ನು ನಾರಾಯಣರಾಯರು ಅಕ್ಷರಶಃ ಒಪ್ಪಿಕೊಳ್ಳ ದಿದ್ದರೂ ತನ್ನ ಹೆತ್ತ ತಾಯಿಯ ವಿಚಾರಕ್ಕೆ ವಿರುದ್ಧ ಹೋಗಲು ಸಿದ್ಧರಿರಲಿಲ್ಲ. ಅದರ ಪರಿಣಾಮವಾಗಿ ತುಳಸಿಯು ತನ್ನ ಓದನ್ನು ಮೆಟ್ರಿಕ್ಕು ಮುಗಿಸಿ ನಿಲ್ಲಿಸ ಬೇಕಾಯಿತು.

ಕಂಟ್ರಾಕ್ಟರ್ ಸಂಕಣ್ಣನವರು ವ್ಯಾಪಾರ ವಹಿವಾಟಗಾಗಿ ಆಗಾಗ್ಗೆ ಮೂಲ್ಕಿ ಅತ್ತಕಡೆಗೆ ಬಂದು ಹೋಗುತ್ತಿದ್ದರು. ಅವರಿಗೆ ನಾರಾಯಣ ರಾಯರ ಪರಿಚಯ ಮೊದಲಿನಿಂದಲೂ ಇದ್ದಿತು. ಆದ್ದರಿಂದಲೇ ಆ ಪರಿಚಯ ಈಗ ರಕ್ತಸಂಬಂಧಕ್ಕೆ ಇಳಿದು ಬರುವಂತಾಯಿತು. ಹಾಗೂ ಸಂಕಣ್ಣನವರ ಎಣಿಕೆಯಂತೆ ತಕ್ಕ ಸಮಯದಲ್ಲಿ ಗಮೇಶ ತುಳಸಿಯರ ಮದುವೆಯ ಕಾರ್ಯ

ವೂ ನಡೆಯಿತು. ಹೆಣ್ಣಿನ ಕಡೆಯವರು ಮದುಮಗನಿಗೆ ಬಂಗಾರದ ಕೈಗಡಿಯಾರ ಮತ್ತು ಎರಡುಉಂಗುರಗಳನ್ನು ಉಡುಗೊರೆ ಮಾಡಿದ್ದರು. ಗಂಡಿನ ಕಡೆಯವರೂ ಮದುಮಗಳಿಗೆ ಕೊಡಬೇಕಾಗಿರುವುದಕ್ಕಿಂತಲೂ ಹೆಚ್ಚಿಗೆ ಕೊಟ್ಟಿದ್ದರು. ವರದಕ್ಷಿಣೆ ಇತ್ತೋ ಎಂಬುದು ಯಾರಿಗೂ ಗೊತ್ತಿಲ್ಲ. ಸಂಕಣ್ಣ ಅದನ್ನು ಯಾರಿಗೂ ಹೇಳಿಲ್ಲ. ರಮೇಶನ ಮದುವೆ ಮುಗಿದಂದಿನಿಂದ ಸಂಕಣ್ಣ ಸ್ವಲ್ಪ ಉಲ್ಲಾಸದಿಂದಿರುವರು ಎಂದೆನ್ನಬಹುದು. ತನ್ನ ಮಗ ತನ್ನ ಹಾಗೆ ಚುರುಕಾಗಿರುವುದಿಲ್ಲವೆಂಬ ಭಾವನೆ ತೊಲಗಿ ಹೋಗಿರುವಂತೆ ಕಾಣುತ್ತದೆ. ತುಳಸಿಯೂ ಅದನ್ನೇ ತೋರಿಸಿಕೊಟ್ಟಳು. ಬಂಗಾರದಂತಹ ಸಂಕಣ್ಣನವರ ಮನೆತನಕ್ಕೆ ತುಳಸಿಯ ಬರೋಣವು ಸಾಲುದೀಪ ಹಚ್ಚಿಸಿದಂತಾಯಿತು. ಈಗ ರಮೇಶನೂ ಸ್ವಲ್ಪ ಬದಲಾಗಿದ್ದಾನೆ. "ಮದುವೆಯಾಗಿಯೂ ಹುಡುಗನ ಚಳಿ ಹೋಗಲಿಲ್ಲ"ವೆಂಬ ಮಾತು ನೆರೆಹೊರೆಯಲ್ಲಿ ಹುಟ್ಟುವುದಕ್ಕೆ ರಮೇಶನು ಎಡೆಗೊಡಲಿಲ್ಲ. ತಂದೆಯ ಜತೆ ವ್ಯವಹಾರದ ಸಲುವಾಗಿಯೂ ಹೋಗುವಂತೆ ತಮ್ಮನ ಜತೆ ಅಂಗಡಿಯಲ್ಲಿಯೂ ಕುಳಿತುಕೊಳ್ಳುತ್ತಿದ್ದನು. ಆದರೆ ರಮೇಶನು ಮನೆಯವರಿಗೆ ಬೇಕಾದವನಾಗಿ ಅವರ ಪ್ರೀತಿಗೆ ಪಾತ್ರನಾದಾಗ ತನ್ನ ಹೆಂಡತಿಯ ಕೋಪಕ್ಕೆ ಗುರಿಯಾಗಬೇಕಾಯಿತು. ತುಳಸಿಯು ಎಂದಿಗೂ ಇದ್ದಲ್ಲಿಯೇ ಇರುವವಳಲ್ಲ. ಅವಳಿಗೆ ನಾಲ್ಕು ಜನ ಗೆಳತಿಯರೊಡನೆ ಕೂಡಿರಬೇಕು. ಅವರ ಬಳಿಗೆ ಹೋಗಬೇಕು. ಅವರನ್ನು ತಾನಿರುವಲ್ಲಿಗೆ ಕರೆಯಬೇಕು. ಮಂಗಳೂರು ನಗರದಲ್ಲಿಯೇ ಇರುವುದರಿಂದ ಸಂಜೆಗೆ ಅಡ್ಡಾಡಿ ಬರಲು ತುಂಬಾ ಆಶೆ. ರಮೇಶನು ಅವಳ ಈ ಅನುರೋಧಕ್ಕೆ ಕಿವಿಗೊಡುತ್ತಿದ್ದಿಲ್ಲ. ಅಲ್ಲದೆ ಅವಳ ಜತೆ ಸಂಬಂಧಿಕರ ಮನೆಗೆ ಕೂಡಾ ಹೋಗಿ ಬರಲು ಸಿದ್ಧನಾಗುತ್ತಿದ್ದಿಲ್ಲ. ಇದನ್ನು ಸಂಕಣ್ಣನವರೂ ತಿಳಿದಿದ್ದರು. ಆದರೆ ಅವರು ಏನನ್ನೂ ಹೇಳಲು ಮುಂದಾಗಲಿಲ್ಲ. ರಮೇಶನ ನಡಾವಳಿಕೆಯ ನೆಲೆಯನ್ನು ಅವರು ಕೂಡಾ ಇಂದಿನವರೆಗೂ ತಿಳಿದಿರಲಿಲ್ಲ. ಒಂದೆರಡು ಬಾರಿ ತುಳಸಿಯನ್ನೇ ಕರೆದು ಸಮಾಧಾನ ಹೇಳಿದರು. ಲಲಿತೆಯನ್ನು ಜತೆಕಟ್ಟಿಕೊಂಡು ಅಡ್ಡಾಡಿ ಬರಲು ಹೇಳಿದರು. ಲಲಿತೆಗೆ ಅದುವೇ ಬೇಕಾದುದು. ತುಳಸಿಗೆ ಮಾತ್ರ ಅದು ಬೇಕಾಗಿಲ್ಲ. ಕಾರಣ, ರಮೇಶನಿಗೆ ಮದುವೆಗೆ ಬಂದಿದ್ದ ಉಡುಗೊರೆಗಳನ್ನೆಲ್ಲ ಅವನು ಲಲಿತೆಗೆ ಇನಾಮಾಗಿ ಕೊಟ್ಟಿದ್ದ. ಅದನ್ನು ನೋಡಿ ತುಳಸಿಯಿಂದ ಸಹಿಸಿಕೊಳ್ಳಲಾಗಲಿಲ್ಲ. ಇದನ್ನು ತಿಳಿದು

ಸೀತಕ್ಕ ಕೋಪಗೊಂಡಳು. ಗಂಡನಿಗೆ ದೂರುಕೊಟ್ಟಳು. ಒಂದು ದಿನ ಸಂಕಣ್ಣ ರಮೇಶ ಮತ್ತು ಲಲಿತೆಯನ್ನು ಕರೆದು ಒತ್ತಟ್ಟು ನಿಲ್ಲಿಸಿ ಈ ಸಂಗತಿಯನ್ನು ಕೇಳಿದರು. ರಮೇಶ ನಡೆದ ಸಂಗತಿಯನ್ನು ಬಿಚ್ಚಿ ಹೇಳಿದ. ತನಗೆ ಅಂಥಾ ಉಡುಗೊರೆಗಳನ್ನೆಲ್ಲಾ ಇಟ್ಟು ತಿರುಗಾಡಬೇಕೆಂಬ ಅಭಿಲಾಷೆಯಿಲ್ಲವೆಂದೂ ಅಲ್ಲದೆ ಲಲಿತೆಗೆ ಮಾತು ಕೊಟ್ಟಂತೆ ಅವಳಿಗೆ ಕೊಟ್ಟುಬಿಟ್ಟೆನೆಂದೂ ಮಾತು ಮುಗಿಸಿದ. ಹಿರಿಯ ಮಗನು ಮದುವೆಯ ಗದ್ದಲ ಮರೆಯುವ ಮೊದಲೇ ಆಡಂಬರ ಬಿಟ್ಟು ಇರುವುದು ಸಂಕಣ್ಣನವರಿಗೆ ಸರಿಯೆಂದು ಕಾಣಲಿಲ್ಲ. ಅದಕ್ಕಾಗಿ ಲಲಿತೆಗೆ ಎರಡು ಬಿಸಿಮಾತುಗಳನ್ನು ಹೇಳಿದರು. ಅಷ್ಟರಲ್ಲಿ ಲಲಿತೆಯು ತನಗೆ ಅಣ್ಣನಿಂದ ಬಂದಿರುವ ಉಡುಗೊರೆಗಳನ್ನೆಲ್ಲ ತಂದು ಅಲ್ಲಿ ಒಪ್ಪಿಸಿದಳು. ಆದರೆ ರಮೇಶ ಅದನ್ನು ಮಗದೊಮ್ಮೆ ಸ್ವೀಕರಿಸಲು ನಿರಾಕರಿಸಿದ. ಕೊಟ್ಟುದುದನ್ನು ವಾಪಾಸು ಕೇಳಬಾರದೆಂದೇ ನಿಶ್ಚಯಿಸಿಕೊಂಡ. ಈ ಚರ್ಚೆಯು ಇನ್ನೂ ಸ್ವಲ್ಪ ದೊಡ್ಡದಾಗಿ ಬೆಳೆಯಲಿತ್ತು. ಆದರೆ ಸಂಕಣ್ಣ ತನ್ನ ಹಿರಿತನವನ್ನು ಅಲ್ಲಿ ತೋರಿಸದೆ ಬಿಡಲಿಲ್ಲ. ತುಳಸಿಯ ಮನಸ್ಸು ಸಮಾಧಾನವಾಗುವುದಕ್ಕಾಗಿಯೂ ವಾತಾವರಣ ತಿಳಿಯಾಗುವುದಕ್ಕಾಗಿಯೂ ರಮೇಶತುಳಸಿಯರನ್ನು ಮೂಲ್ಕಿಗೆ ಕಳುಹಿಸಿಕೊಟ್ಟು "ನಾಲ್ಕು ದಿನ ಅಡ್ಡಾಡಿ ಬನ್ನಿರಿ" ಎಂದು ಆಶೀರ್ವದಿಸಿದರು.

ಇನ್ನೊಂದು ವರುಷ ದಾಟದಾಗ ಲಲಿತೆಯ ಮದುವೆಯ ಪ್ರಸ್ತಾಪ ಮೇಲಕ್ಕೆ ಬಂದಿತ್ತು. ತುಳಸಿಗೆ ಸೀಮಂತವಾಗುವುದಿತ್ತು. ಸೀಮಂತ ಮೊದಲು ಮಾಡುವುದೋ ಲಲಿತೆಯ ಮದುವೆಯನ್ನು ಮೊದಲು ನೆರವೇರಿಸುವುದೋ ಎಂಬ ವಿಚಾರವೂ ಸ್ವಲ್ಪ ತಾಕಲಾಡಿತು. ಲಲಿತೆಯ ಮದುವೆಯ ದಿನವನ್ನು ನಿಶ್ಚಯಿಸುವ ಅಧಿಕಾರವು ವರನ ಕಡೆಯವರದ್ದು. ಸೀಮಂತದ ದಿನವನ್ನು ಮುಂದುವರಿಸಲು ಸಂಕಣ್ಣನವರಿಂದ ಸಾಧ್ಯವಿಲ್ಲ. ಮಂಗಳೂರಿನಿಂದ ಮೂಲ್ಕಿಗೆ ಹೋಗುವ ದಾರಿಯಲ್ಲಿ ಎರಡು ಕಡವುಗಳಿವೆ. ಸ್ತ್ರೀಯರು ಮೊದಲ ಬಸ್ಸಿನಲ್ಲಿ ತುಂಬಾ ಬಳಲಿ ಹೋಗುವರು. ಅಲ್ಲದೆ ಮೋಟಾರಿನಲ್ಲಿ ಇಲ್ಲಿಂದಲ್ಲಿಗೆ ಹೋಗುವಾಗ್ಗೆ ತುಂಬಾ ದಣಿವಾಗುವ ಸಂಭವನಿದೆ. ಈ ಮಧ್ಯಂತರದಲ್ಲಿ ಅಂಗಡಿಯಲ್ಲಿ ಮತ್ತು ಮನೆಯೊಳಗೆ ಸ್ವಲ್ಪ ಮಾತು ಹುಟ್ಟಿ ಮಾಯ್ದಿದೆ. ಅಂಗಡಿಯಲ್ಲಿ ಖಾಯಂ ಕುಳಿತುಕೊಳ್ಳುವವನು ಉಮೇಶ. ಅಂಗಡಿಯ ನೌಕರರೂ ಅವನಿಗೆ ಅಷ್ಟೇ ಹೆದರುತ್ತಿದ್ದರು. ನೌಕರರು ಪ್ರಾಯದಲ್ಲಿ ಅವನಿ

ಗಿಂತ ಹಿರಿಯರಾಗಿರಲಿ ಕಿರಿಯರಾಗಿರಲಿ ಅವನು ಹೇಳುವುದನ್ನು ಹೇಳಿಯೇ ಬಿಡುತ್ತಿದ್ದ. ಅವನಿಂದ ಕೇಳದೆ ಏನನ್ನಾದರೂ ಮಾಡಿದರೆ ಹೆಚ್ಚಿಗೆ ಹೇಳುವುದೇ ಬೇಡ. ಅದೇ ನೌಕರರು ರಮೇಶನು ಅಂಗಡಿಯಲ್ಲಿರುವಾಗ್ಗೆ ಸ್ವಲ್ಪ ಉಲ್ಲಾಸದಿಂದಿರುವರು. ಬಾಡಿದ ಮುಖಗಳಲ್ಲಿ ನಗು ಕಂಡುಬರುವುವು. ಅದನ್ನು ಉಮೇಶನಿಂದ ನೋಡಿ ಸಹಿಸಲಿಕ್ಕಾಗುತ್ತಿದ್ದಿಲ್ಲ. ನೌಕರರಿಗೆ ತಿಂದದ್ದು ಕಣ್ಣಲ್ಲಿ ಬರುತ್ತದೆಂಬುದೇ ಅವನ ಎಣಿಕೆ. ಯಜಮಾನರ ಸಮಕ್ಷಮದಲ್ಲಿ ನೌಕರರು ನೌಕರರಾಗಿಯೇ ಇರಬೇಕು. ಯಾರ ಮನೆಯಲ್ಲಿ ಯಾರೇ ಸಾಯಲಿ, ಏನೇ ಜರಗಲಿ, ಮದುವೆಯಿರಲಿ, ಸೀಮಂತ ಇರಲಿ ಅವನು ಯಾರಿಗೂ ಒಂದು ದಿನ ಕೂಡ ರಜೆ ಕೊಡುತ್ತಿದ್ದಿಲ್ಲ. ಬೆಳಗ್ಗಿನಿಂದ ಸಂಜೆಯ ವರೆಗೆ ಅಂಗಡಿಯಲ್ಲಿದ್ದುಕೊಂಡು ದುಡಿಯಲೇ ಬೇಕು. ರಮೇಶನಿಗೆ ಅದೆಲ್ಲ ಆಗದು. ಸತ್ಯ ಕಾರಣ ಕೊಟ್ಟು ಯಾರೇ ಬಂದು ಅವನಲ್ಲಿ ಹೇಳಿಕೊಂಡರೆ, ಅವರಿಗೆ ರಜೆ ಸಿಗುವುದು ಖಂಡಿತ. ಅಲ್ಲದೆ ಹಬ್ಬಹುಣ್ಣಿಮೆ ದಿನಗಳಲ್ಲಿ ಸ್ವಲ್ಪ ಹೆಚ್ಚಿಗೆ ಹಣ, ದವಸಧಾನ್ಯಗಳನ್ನೂ ಕೊಡುವುದೂ ಉಂಟು. ಇದು ಸಂಕಣ್ಣನವರ ಕಿವಿಗೂ ಬಿದ್ದಿತ್ತು. ಆಗ್ಗೆ ಅವರ ತಾರುಣ್ಯದ ಕಥೆಗಳೆಲ್ಲ ಅವರ ಕಣ್ಣಲ್ಲಿ ಮೂಡಿತ್ತು. ರಮೇಶನಿಗೆ ಹೇಳುವುದನ್ನು ರಮೇಶನಿಗೆ ಹೇಳಿ ಉಮೇಶನಿಗೆ ಹೇಳುವುದನ್ನು ಉಮೇಶನಿಗೆ ಹೇಳಿ ಮನೆಯನ್ನು ಚೆನ್ನವಾಗಿಟ್ಟದ್ದರು. ರಮೇಶನು ಅಂಗಡಿಯನ್ನು ಹಾಳು ಮಾಡುತ್ತಾನೆಂದು ಉಮೇಶನು ದೂರು ಕೊಡುತ್ತಿದ್ದರೆ, ಸಂಕಣ್ಣ ಕೋಪಗೊಳ್ಳಬಹುದಿತ್ತು. ನೌಕರರ ಬಗ್ಗೆ ಯಜಮಾನರು ಯಾವಾಗಲೂ ಜಾಗ್ರತೆಯಿಂದಿರುವುದು ಒಳ್ಳೇದೆ. ರಮೇಶನ ಔದಾರ್ಯವೂ ಉಮೇಶನ ಕಾಠಿಣ್ಯವೂ ಎರಡೂ ವ್ಯಾಪಾರೋದ್ಯಮದ ಮುಖಗಳೇ. ಆದರೆ ಉಮೇಶನು ತಾನು ಅಂಗಡಿಯಲ್ಲಿ ನಡೆಸುವ ದಬ್ಬಾಳಿಕೆಯನ್ನೇ ಮನೆಯಲ್ಲಿ ನಡೆಸಲು ಹೊರಟಾಗ ತುಳಸಿಯಿಂದ ಸಹಿಸಿಕೊಳ್ಳಲಾಗಲಿಲ್ಲ. ಕೆಲವು ದಿನಗಳ ವರೆಗೆ ಅವಳು ಅವನ ಬಿರುನುಡಿಯನ್ನು ಕೇಳಿ ಸಹಿಸಿಕೊಂಡಳು. ಕೈ ಹಿಡಿದ ಗಂಡ ಅಥವಾ ಅತ್ತೆಮಾವಂದಿರು ಉಮೇಶನಿಗೆ ಈ ಸಂದರ್ಭದಲ್ಲಿ ಬುದ್ಧಿ ಹೇಳಿದುದನ್ನು ಅವಳು ನೋಡಿರಲಿಲ್ಲ. ಕ್ರಮೇಣ ಅವಳ ವಿಚಾರ ಬದಲಾಗಿ ಉಮೇಶನು ಬಿರು ನುಡಿಯುವಾಗ್ಗೆ ಮರುತ್ತರವೀಯತೊಡಗಿದಳು. ಮತ್ತೆಮತ್ತೆ ಅವನ ಒಂದು ಮಾತಿಗೆ ಎರಡು ಉತ್ತರ ಕೊಟ್ಟುದೂ ಉಂಟು. ಒಂದೊಮ್ಮೆ ಉಮೇಶ ಮನೆಯ ಯಜಮಾನ ತಾನೇ ಎಂದು ಅಭಿಮಾನ

ತೋರಿದ್ದುಂಟು. ಆದಕ್ಕೆ ತುಳಸಿಯು ಅಷ್ಟೇ ದಿಟ್ಟತನದಿಂದ "ಏನನ್ನು ನಿನಗೆ ಇಲ್ಲಿ ಹೇಳುವುದಿದೆಯೋ ಅದನ್ನು ಅಂಗಳದ ಹೊರಗೆ ನಿಂತು ಹೇಳು. ಎಂದಿನ ವರೆಗೆ ನಾನು ಈ ಮನೆಯಲ್ಲಿರುವೆನೋ ಅಂದಿನ ವರೆಗೆ ಮನೆಯ ಕುರಿತು ಮಾತಾಡಿದೆಯೆಂದರೆ ಜಾಗ್ರತೆ ಮಾಡಿಕೊಳ್ಳು" ಎಂದೆಂದಿದ್ದಳು.

ಇದಾಗಿ ಸ್ವಲ್ಪ ದಿನಗಳಲ್ಲಿಯೇ ತುಳಸಿಯು ಸೀಮಂತವಾಗಿ ತವರುಮನೆಗೆ ಹೋಗಲಿದ್ದುದರಿಂದ ಒಮ್ಮೆಯು ಬಿಸಿಬಿಸಿ ವಾತಾವರಣ ಮೆಲ್ಲನೆ ಶಾಂತವಾಯಿತು. ತುಳಸಿ ತವರು ಮನೆಗೆ ಹೊರಟು ಹೋದಳು. ಅದಾಗಿ ಕೆಲವು ದಿನಗಳ ಮೇಲೆ ಲಲಿತೆಯೂ ಮದುವೆಯಾಗಿ ಗಂಡನ ಹಿಂದೆ ನಡೆದಳು. ಮನೆಯೊಳಗೆ ಈ ಮೊದಲಿನ ಶಾಂತಿಯೇ ಮತ್ತೊಮ್ಮೆ ನೆಲೆಯೂರಿತು! ಮಾತಿಗೆ ಮಾತು ಹುಟ್ಟದಿದ್ದರೆ, ಪ್ರತ್ಯುತ್ತರ ಬಾರದೆ ಹೋದರೆ ವಾತಾವರಣ ತನ್ನಷ್ಟಕ್ಕೆ ಶಾಂತವಾಗುವುದು. ರಮೇಶ ವಾರಕ್ಕೊಮ್ಮೆ ಹೆಂಡತಿ ಮನೆಗೆ ಹೋಗಿ ಬರುತ್ತಿದ್ದ. ಅವನು ಎರಡು ದಿನ ಅಲ್ಲಿ ನಿಂತು ಬರುವುದರೊಳಗೆ ಉಮೇಶನು ಇಲ್ಲಿ ಮಾಡುವುದೆಲ್ಲವನ್ನು ಮಾಡಿಬಿಡುತ್ತಿದ್ದ. ಈ ಮೊದಲು ಅವನಿಗೆ ಕೈಯಲ್ಲಿ ಕಾಸು ಮಾಡಿಡುವ ಆಲೋಚನೆ ಬಂದಿರಲಿಲ್ಲ. ಈಗೀಗ್ಗೆ ಅವನ ಮನಸ್ಸಿನಲ್ಲಿ ಅದು ನೆಟ್ಟುಹೋಗಿದೆ. ಕೈಯಲ್ಲಿ ನಾಲ್ಕು ಕಾಸು ಮಾಡಿಕೊಂಡು ನಾಲ್ಕು ಜನರಿಂದ ಹೊಗಳಲ್ಪಡಬೇಕೆಂಬ ಅಭಿಲಾಷೆಯು ಅವನ ಕಣ್ಣು ಮುಖದಲ್ಲಿ ಮೂಡಿದೆ. ಇದನ್ನು ಸಂಕಣ್ಣನವರು ತಿಳಿಯುವುದಕ್ಕಿಂತಲೂ ಹೆಚ್ಚಾಗಿ ರಮೇಶನು ತಿಳಿದಿದ್ದ. ಆದರೆ ಏನನ್ನೂ ಹೇಳುತ್ತಿದ್ದಿಲ್ಲ. ಬೆಳಗ್ಗಿನಿಂದ ಸಂಜೆಯ ವರೆಗೆ ಅಂಗಡಿಯಲ್ಲಿ ಕುಳಿತುಕೊಳ್ಳುವವ ಉಮೇಶ. ಅವನು ನಾಲ್ಕು ಸಲ ಚಹ ಕುಡಿದರೆ, ಎಂಟು ಸಲ ಹೊಗೆ ಹಾರಿಸಿದರೆ ರಮೇಶನ ಕೈಯಿಂದ ಏನೂ ಹೋಗುತ್ತಿದ್ದಿಲ್ಲ! ಎಷ್ಟು ಜಾಗ್ರತೆಯಿಂದ ಅಂಗಡಿಯ ಆಡಳಿತೆಯನ್ನು ನೋಡುತ್ತಿರಬೇಕೋ ಅದಕ್ಕಿಂತ ಹೆಚ್ಚಿಗೆ ಅವನು ಅಂಗಡಿಯ ಕುರಿತು ಜವಾಬ್ದಾರಿ ತೆಗೆದುಕೊಂಡಿರುವಾಗ್ಗೆ ಬುದ್ಧಿವಂತರು ಯಾರೂ ಟೀಕೆ ಮಾಡುವಂತಿಲ್ಲ. ರಮೇಶನೂ ಮಾಡಲಿಲ್ಲ. ಕೆಲವು ತಿಂಗಳುಗಳು ಕಳೆಯುತ್ತಲೆ ತುಳಸಿ ತೊಟ್ಟಿಲ ಮಗು ಸಹಿತ ಗಂಡನ ಮನೆಗೆ ಬಂದಳು. ಹಿಂದಿನ ನೋವು ಮತ್ತೊಮ್ಮೆ ನೋಯುತೊಡಗಿತು. ಅತ್ತಿಗೆಯ ಬಗ್ಗೆ ಪವಿತ್ರ ಭಾವನೆಯು ಉಮೇಶನಲ್ಲಿಯೂ ಹುಟ್ಟಲಿಲ್ಲ. ಮೈದುನನ ಬಗ್ಗೆ ಪವಿತ್ರ ಭಾವನೆಯು ತುಳಸಿಯಲ್ಲಿಯೂ ಹುಟ್ಟಲಿಲ್ಲ. ಎರಡು ಬುದ್ಧಿಯ ಎರಡು ವಿಚಾರದ

ಮನುಷ್ಯರು ಒಂದು ರೈಲ್ವೇ ಕಂಪಾರ್ಟ್‌ಮೆಂಟಿನಲ್ಲಿ ಪ್ರಯಾಣ ಬೆಳೆಸುವಂತಿತ್ತು ಅವರೊಳಗಿನ ಪರಿಸ್ಥಿತಿ.

ಇನ್ನು ಎರಡು ವರುಷ ಹಾಗೆಯೇ ಸಾಗಿತು. ಮನೆಯೊಳಗೆ ಈ ಮೊದಲಿನ ಮನಸ್ತಾಪ ಇರಲಿಲ್ಲ. ಕಾರಣ, ಉಮೇಶನು ಮೊದಲಿನಂತೆ ಮನೆಯಲ್ಲಿ ಬಂದು ದರ್ಪದ ಮಾತುಗಳನ್ನು ಆಡುತ್ತಿದ್ದಿಲ್ಲ. ಅಲ್ಲದೆ ಮನೆಯಲ್ಲಿಯೂ ತನ್ನ ಹೆಚ್ಚಿನ ಸಮಯವನ್ನು ಕಳೆಯುತ್ತಿದ್ದಿಲ್ಲ. ಊಟಕ್ಕಾಗಿ ಬರುತ್ತಾನೆ, ಹೋಗುತ್ತಾನೆ. ಮೊದಮೊದಲು ಯಾವಾಗಲೋ ಒಂದು ದಿನ ಮನೆಗೆ ಮಲಗಲು ಬರುತ್ತಿದ್ದಿಲ್ಲ. ಹಗಲಲ್ಲಿ ಅವನಿಗೆ ಎಲ್ಲಿಗಾದರೂ ಹೋಗಲು ಸಮಯ ಸಿಗುತ್ತಿದ್ದಿಲ್ಲವಾದ್ದರಿಂದ ರಾತ್ರಿಯಲ್ಲಿ ಸಿನೇಮ ನೋಡಲೋ ಅಥವಾ ನಾಟಕ ನೋಡಲೋ ಹೋಗುತ್ತಲಿದ್ದ. ಆಂಕಆಯನಗಳಿಗೆ ಹೋಗುವ ಹುಚ್ಚು ಅವನಿಗೆ ಬಹಳ. ಬಯಲಾಟವೆಂದರೆ ಎಷ್ಟು ದೂರ ಹೋಗಲೂ ಸಿದ್ಧತೆ ನಡೆಸುವನು. ಬೆನ್ನ ಹಿಂದೆ ನಾಲ್ಕು ಜನ ಗೆಳೆಯರೂ ಬರುವರು. ಈಗೀಗ್ಗೆ ತಿಂಗಳ್ಳಿ ಕೆಲವು ದಿನ ಅವನು ಮನೆಗೆ ಮಲಗಲು ಬಾರದಿರುವ ದಿನಗಳುಂಟು. ಇದನ್ನು ನೋಡುತ್ತಿರಲು ಹೆತ್ತವರಿಂದ ಆಗಲಿಲ್ಲ. ಸಂಕಣ್ಣ ಒಂದು ದಿನ ಉಮೇಶನನ್ನು ಕರೆದು ಮುಖ ಕಪ್ಪುಮಾಡಿ ಈ ವಿಷಯವನ್ನು ಕೇಳಿದರು. ಆದರೆ ಉಮೇಶ ಅವರ ಬೆದರಿಕೆಗೆ ಹೆದರದೆ, "ಏನು ಇನ್ನೊಮ್ಮೆ ಮನೆಯೊಳಗೆ 'ಲಂಕಾದಹನ' ಆಗಬೇಕೆಂಬ ಆಶೆಯಿದೆಯೋ? ಆ ಶೂರ್ಪನಖಿಯ ಕೈಯ ನೀರು ಮುಟ್ಟಬಾರದೆಂದಿದ್ದೆ. ನಿಮಗಾಗಿ, ನಿಮ್ಮ ಮುಖ ನೋಡಿ ಮಾತಾಡುವುದಿಲ್ಲ. ಏನೆಂದು ತಿಳಿದುಕೊಂಡಿರುವಿರಿ?" ಎಂದು ದಿಟ್ಟತನದಿಂದ ನುಡಿದು ಹೊರಟು ಹೋದನು. ಸಂಕಣ್ಣನವರ ಮನಸ್ಸಿಗೆ ಈ ಮಾತು ಚೆನ್ನಾಗಿ ನಾಟಕೊಂಡು ಉಮೇಶನು ಮನೆಗೆ ಸರಿಯಾಗಿ ಬಾರದೆ ಇರುವುದರಲ್ಲಿಯೂ ಗುಟ್ಟು ಇರುವುದೆಂದು ತಿಳಿದುಕೊಂಡರು. ಆದರೆ ಉಮೇಶನು ತುಸು ಸಮಾಧಾನದಿಂದಿರುತ್ತಿದ್ದರೆ ತುಳಸಿ ಅಂಥಾ ಕೋಪಿಷ್ಟೆ ಹೆಣ್ಣಲ್ಲ. ಅವಳಿಗೂ ಮನೆತನದ ಮರ್ಯಾದೆಯ ಚೆನ್ನಾಗಿ ಅರಿವಿದೆ. ಮತ್ಸರದಿಂದ ಕೊಕ್ಕೆ ಮಾತಾಡುವವರನ್ನು ಮಾತ್ರ ಅವಳಿಂದ ನೋಡಲಿಕ್ಕಾಗುವುದಿಲ್ಲ. ಇದೇ ಸಂದರ್ಭದಲ್ಲಿ ಅವರ ಹಿರಿಯ ಮಗಳು ಕಮಲೆಯು ಏಳು ತಿಂಗಳ ಬಸುರು ಹೊತ್ತುಕೊಂಡು ತವರಿಗೆ ಬಂದಳು. ಮತ್ತೊಂದು ದಿಕ್ಕಿನಲ್ಲಿ ಲಲಿತೆಯ ಸೀಮಂತದ ವಿಚಾರ ನಡೆದಿತ್ತು. ಇದೇ ಸಮಯದಲ್ಲಿ ಉಮೇಶನಿಗೂ ಮದುವೆ ಮಾಡಿದರೆ ಆದೀತೆಂಬ

ವಿಚಾರ ಸಂಕಣ್ಣನ ಮನಸ್ಸಿನಲ್ಲಿ ಸುಳಿಯದೆ ಇರಲಿಲ್ಲ. ಈ ಮಾತನ್ನು ಹೆಂಡತಿಯ ಕೂಡೆ ಕೇಳಿಯೂ ನೋಡಿದರು. ಅದಕ್ಕೆ,

"ನಾನೇ ಹೇಳುವವಳಿದ್ದೆ. ಒಮ್ಮೊಮ್ಮೆ ನೀವು ಕೋಪಗೊಳ್ಳುವುದೂ ಉಂಟು. ಅದಕ್ಕಾಗಿ ಸುಮ್ಮನಿದ್ದೆ" ಎಂಬ ಉತ್ತರ ಬಂತು.

"ರಮೇಶನೂ ಮದುವೆಯ ಮೊದಲು ಸ್ವಲ್ಪ 'ಸಡಿಲಾ'ಗಿದ್ದ. ಈಗ ಹೇಗೆ ಸರಿಯಾಗಿದ್ದಾನೆ? ಇವನು ಕೂಡಾ ಹಾಗೆಯೇ. ಮತ್ತೆ ನೋಡಬೇಕು ರಾತ್ರಿಗೆ ಮನೆಗೆ ಮಲಗಲು ಬಾರದೆ ಎಲ್ಲಿಗೆ ಹೋಗುತ್ತಾನೆಂದು".

"ಈ ಮೊದಲೇ ಮದುವೆ ಮಾಡುತ್ತಿದ್ದರೆ ಒಳ್ಳೇದಿತ್ತು. ಅವನಿಗೆ ಇದು ಈಗ ಇಪ್ಪತ್ತೈದು ನಡೆಯುತ್ತಿರುವುದು. ಅವನ ಪ್ರಾಯದವರು ಒಂದು, ಎರಡು ಮಕ್ಕಳ ತಂದೆಯಾಗಿರುವುದು ಅವನಿಗೆ ಕಾಣುತ್ತಿರುವುದಿಲ್ಲವೋ?"

"ಸರಿ ಸತ್ಯವನ್ನೆ ನುಡಿದೆ. ಮೂವತ್ತು ವರುಷ ಪ್ರಾಯವಾಗಿದ್ದರೂ ಮದುವೆಯಾಗದೆ ಇರುವವರೂ ಇದ್ದಾರೆ. ಅವರು ಮಾತ್ರ ನಿನಗೆ ಕಾಣುತ್ತಿರುವುದಿಲ್ಲ. ಪ್ರಾಯಕ್ಕೆ ಬಂದ ಮೇಲೆ ಮದುವೆಯಾದರೆ ಒಳ್ಳೇದೆಂದು ಯಾರೋ ಹೇಳುತ್ತಿದ್ದುದನ್ನು ಕೇಳಿದ್ದೆ. ಅದರಂತೆ ಇಷ್ಟು ದಿನ ಕಾದದ್ದು. ಇನ್ನು ಏನು? ಇದೇ ವರುಷದಲ್ಲಿ ಮದುವೆ ತೆಗೆಯುವುದು." ಎಂದನ್ನುತ್ತಾ ಸಂಕಣ್ಣ ತಿರುಗಿ ನಿಂತಾಗ ಮಧ್ಯಾಹ್ನದ ಊಟಕ್ಕಾಗಿ ಮನೆಗೆ ಬಂದಿದ್ದ ಉಮೇಶ ಅಂಗಿ ಕಳಚಿಕೊಳ್ಳುತ್ತಲಿದ್ದ. ಅವನನ್ನು ನೋಡಿ ಸಂಕಣ್ಣ ತನ್ನ ಬಳಿಗೆ ಬರುವಂತೆ ಕರೆದರು. ಹೀಗೆ ಕರೆಯುವುದು ಯಾವುದೊ ಒಂದು ಕೆಲಸದ ನಿಮಿತ್ತವಾಗಿ ಎಂದು ತಿಳಿದ ಉಮೇಶ ಕರೆದಾಕ್ಷಣದಲ್ಲಿಯೇ ಓಡಿ ಬರಲಿಲ್ಲ. ಬಚ್ಚಲಿಗೆ ಹೋಗಿ ಕೈ ಕಾಲು ತೊಳೆದುಕೊಂಡು, ಮುಖ ಒರಸಿಕೊಂಡು ಬಂದನು. ಕಳೆದ ವಾರದಲ್ಲಿ ಅಂಗಡಿಯಲ್ಲಿ ಒಂದು ಸಣ್ಣ ವಿಷಯಕ್ಕಾಗಿ ಮತಭೇದ ಹುಟ್ಟಿತ್ತು. ಬಂದರಕ್ಕೆ ದೋಣಿಯಿಂದ ಸೀಯಾಳಗಳು ಬರುತ್ತಿದ್ದುವು. ಅದನ್ನೂ 'ಕಂಟ್ರಾಕ್ಟ್' ಮಾಡಿಕೊಳ್ಳುವ ಆಲೋಚನೆಯನ್ನು ಉಮೇಶನು ಎತ್ತಿದ್ದನು. ಸಂಕಣ್ಣ ಅದಕ್ಕೆ ಒಪ್ಪಿರಲಿಲ್ಲ. ರಥಬೀದಿಯಲ್ಲಿ ಬಾಳೆಹಣ್ಣು ಮತ್ತು ಸೀಯಾಳಗಳನ್ನು ಮಾರುವ ಹಲವು ಅಂಗಡಿಗಳಿವೆ. ಪಟ್ಟಣದ

ಬೇರೆ ಕೆಲವು ಬೀದಿಗಳಲ್ಲಿಯೂ ಅಂಥಾ ಅಂಗಡಿಗಳಿವೆ. ಬಹಳವಾಗಿ ಹೆಚ್ಚಿನ ಅಂಗಡಿಕಾರರು ಬಂದರಕ್ಕೆ ಬಂದು ಸೀಯಾಳಗಳನ್ನು 'ಕಂಟ್ರಾಕ್ಟ' ಮಾಡಿಕೊಂಡು ಒಯ್ಯುವರು. ಹಾಗಿರುವಾಗ್ಗೆ ವ್ಯಾಪಾರದಲ್ಲಿ ನಷ್ಟ ಬೀಳಬಹುದೋ ಎಂಬುದಾಗಿ ಸಂಕಣ್ಣ ಸ್ವಲ್ಪ ಶಂಕಿಸಿದ್ದರು. ಉಮೇಶನಿಗೆ ಅದು ಸರಿಬಿದ್ದಿರಲಿಲ್ಲ. ರಮೇಶ ಬಾಯಿಬಿಡದೆ ತಟಸ್ಥನಾಗಿದ್ದ. ಸಂಕಣ್ಣ ಅದೇ ಮತಭೇದವನ್ನು ಈಗ ನೆನಸಿಕೊಂಡು ಯೋಚಿಸಿದರು. ತಾನು ವೃದ್ಧಾಪ್ಯಗಿಳಿಯುತ್ತಿರುವಾಗ್ಗೆ ಉತ್ತೇಜನವೂ ಕುಗ್ಗುತ್ತಿರುವುದೆಂಬುದನ್ನು ಊಹಿಸಿದರು. ನಾಳೆ ಮನೆತನದ ಜವಾಬ್ದಾರಿ ವಹಿಸಿಕೊಳ್ಳುವ ಮಕ್ಕಳ ವಿಚಾರಕ್ಕೆ ವಿರುದ್ಧ ಹೋಗುವುದೂ ಸರಿಯಲ್ಲ ಎಂದಂದುಕೊಂಡರು. ಆಗಲೇ ಉಮೇಶನು ಬಂದು ಹೆತ್ತವರ ಎದುರು ನಿಂತುಕೊಂಡನು. ಸಂಕಣ್ಣ ಉಮೇಶನನ್ನು ಅಡಿಯಿಂದ ಮುಡಿಯವರೆಗೆ ನೋಡಿದರು. ದೃಷ್ಟಿ ತೀಕ್ಷ್ಣಮಾಡಿ ಮತ್ತೊಮ್ಮೆ ನೋಡಿ,

"ನಿನ್ನ ತಾಯಿಯು ನಿನ್ನ ಮದುವೆಯಾಗಬೇಕೆಂದು ಹೇಳುತ್ತಾಳೆ. ಏನು ಹೇಳುತ್ತೀ? ಹುಡುಗಿಯನ್ನು ನಾವೇ ನೋಡ ಬೇಕೋ? ಅಥವಾ ನೀನೇ ನೋಡಿಟ್ಟಿರುವಿಯಾ?" ಎಂದು ಕೇಳಿದರು.

ಅವರ ಮಾತಿಗೆ ಅವನು ಉತ್ತರ ಕೊಡದಾದ. ಅಲ್ಲಿಗೆ ಬರುವ ಮೊದಲು ಅವನು ಏನನ್ನೋ ಊಹಿಸಿದ್ದ. ತನ್ನ ಮದುವೆಯ ಮಾತೆಂದು ತಿಳಿದು ಸ್ವಲ್ಪ ಅಂಜಿದನು. ಅದನ್ನು ತಿಳಿದು ಸೀತಕ್ಕ,

"ನಮ್ಮ ಎದುರಿಗೆ ಎಲ್ಲಿಯ ನಾಚಿಕೆ! ನಿನ್ನ ತಂದೆ ಹೇಳಿದ್ದು ಕೇಳಿತೋ ನಿನಗೆ. ಹೇಳು, ಹಾಗಾದರೆ ನಾವು ಮದುವೆಯ ಅಟ್ಟಣೆ ಮಾಡಬಹುದೋ?" ಎಂದು ಧ್ವನಿಗೂಡಿಸಿದಳು.

"ನಿಮಗೆ ತಿಳಿದಂತೆ ಮಾಡಿರಿ. ನನಗೆ ಗೊತ್ತಿಲ್ಲ. ನನ್ನಿಂದ ಕೇಳುವುದು ಬೇಡ" ಎಂದನ್ನುತ್ತಾ ಉಮೇಶ ಊಟಕ್ಕೆ ಹೊರಟು ಹೋದ. ಹೆತ್ತವರು ತಂತಮ್ಮ ಮುಖವನ್ನು ನೋಡಿಕೊಂಡರು. ಅಲ್ಲಿಂದ ಹೊರಟು ಹೋಗುವಾಗ್ಗೆ ಉಮೇಶನ ಮುಖದಲ್ಲಿ ಮೂಡಿದ್ದ ತೆಳುನಗುವನ್ನು ನೋಡಿ, ನೆನೆದು ಇಬ್ಬರೂ ಹಲ್ಲುಬಿಡುವಂತಾದರು.

ಅದಾಗಿ ಎರಡು ತಿಂಗಳಲ್ಲಿಯೇ ಉಮೇಶನ ಮದುವೆಯಾಗುವ ಸಿದ್ಧತೆ ನಡೆದಿತ್ತು. ಹೆಣ್ಣು ಶ್ರೀಮಂತ ಮನೆತನದ್ದಾದ್ದರಿಂದ ಉಭಯ ಪಕ್ಷಗಳೂ ಹೆಚ್ಚಿನ ಸಡಗರ ನಡೆಸಿದ್ದವು. ಉಮೇಶನ ಹಲವು ಮಂದಿ ಗೆಳೆಯರು

ಆಗಾಗ್ಗೆ ಮನೆಗೆ ಬಂದು ಮದುವೆ ಮನೆಯನ್ನು ಯಾವ ರೀತಿ ಶೃಂಗರಿಸಬಹು
ದೆಂದು ಎಣಿಕೆಹಾಕಿ ನೋಡಿ ಹೋಗುತ್ತಿದ್ದರು. ಸಂಕಣ್ಣನವರಿಗೆ ಇದು ಸರಿ
ಬೀಳುತ್ತಿದ್ದಿಲ್ಲ. ಹೆಚ್ಚಾಗಿ ಅವರು ಸಂಕಣ್ಣ ಮನೆಯಲ್ಲಿಲ್ಲದ ಹೊತ್ತಿನಲ್ಲಿಯೇ
ಬಂದು ಹೋಗುತ್ತಿದ್ದುದರಿಂದ, ಅವರಿಗೆ ಏನನ್ನೂ ಹೇಳಲು ಆಗುತ್ತಿದ್ದಿಲ್ಲ.
'ಇದು ಸರಿಯುಲ್ಲ' ಎಂದು ಉಮೇಶನಿಗೇ ಹೇಳಲಿದ್ದರು. ಆದರೆ ಅವನ ಮನ
ಸ್ಸಿಗೆ ಇವರ ಮಾತು ಸರಿಬೀಳದೆ ಹೋಗಿ ಮದುವೆ ಕಾರ್ಯದಲ್ಲಿ ನೊಂದು
ಕೊಳ್ಳುವ ಪ್ರಸಂಗ ಬರುವುದೋ ಎಂದು ಶಂಕಿಸಿದರು. ಹಾಗೂ ಮದು
ವೆಯ ದಿನವೂ ಬಂತು. ಮದುವೆಯ ಕಾರ್ಯ ಆರಂಭವಾಯಿತು.
ಸಂಕಣ್ಣ ನಿಬ್ಬಣಿಗರನ್ನು ಸತ್ಕರಿಸುವುದು ಮತ್ತು ಊಟೋಪಚಾರದ ವ್ಯವಸ್ಥೆಯ
ಲ್ಲಿಯೇ ತಲ್ಲೀನರಾಗಿದ್ದರು. ಅಂಗಡಿಯನ್ನೂ ಮೂರು ದಿನಗಳ ವರೆಗೆ ಮುಚ್ಚಿ
ಡುವ ನಿರ್ಧಾರಕ್ಕೆ ಬರಲಾಗಿತ್ತು. ನೌಕರರಿಗೆ ಯಾರೊಡನೆಯೂ ಕೇಳ
ದೆಯೇ ಉಮೇಶನು ಕೆಲವು ಹಣವನ್ನು ಇನಾಮಾಗಿ ಹಂಚಿದ್ದ. ರಮೇಶನು
ಅತಿಥಿಗಳ ಮತ್ತು ಇಷ್ಟಮಿತ್ರರ ಮೇಲ್ವಿಚಾರಣೆಯಲ್ಲಿ ತೊಡಗಿದ್ದ. ನೌಕರ
ವರ್ಗವೆಲ್ಲ ಇಂದಿನ ಮದುವೆ ಕಾರ್ಯದಲ್ಲಿ ಹುಮ್ಮಸ್ಸಿನಿಂದ ಭಾಗವಹಿಸಿರುವು
ದನ್ನು ಕಂಡು ರಮೇಶ ತುಂಬಾ ಉಲ್ಲಸಿತನಾಗಿದ್ದ. ಅವನೊಡನೆ ಕೇಳದೆ
ಉಮೇಶ ನೌಕರರಿಗೆ ಇನಾಮು ಹಂಚಿದ ಪ್ರಸಂಗವೂ ಈ ಸಂತೋಷದ ಮಧ್ಯ
ದಲ್ಲಿ ಮರೆತುಹೋಗಿತ್ತು ಮದುವೆಯು ಮನುಷ್ಯನಿಗೆ ಬದುಕಿನಲ್ಲಿ ಒಮ್ಮೆಲೇ
ಬರುತ್ತದೆ. ಆಗ್ಗೆ ಎಲ್ಲರೂ ಸಮಾಧಾನದಿಂದ ಶಾಂತಚಿತ್ತದಿಂದ ಇರು
ವುದು ಒಳ್ಳೇದು. ಉಮೇಶನು ಎಂದಿನಿಂದಲೂ ನೌಕರವರ್ಗಕ್ಕೆ ಉಪದ್ರವ
ಕೊಡುತ್ತಾ ಬಂದಿದ್ದರೂ ಅದೇ ಜನರು ಇಂದು ಅವನ ಮಂಗಲ ಕಾರ್ಯ
ದಲ್ಲಿ ಸಂತೋಷದಿಂದ ಭಾಗವಹಿಸಿದುದು ಹೆಮ್ಮೆಯ ಸಂಗತಿ. ಮದುಮಕ್ಕ
ಳನ್ನು ಧಾರೆಮಣೆಗೆ ಸುತ್ತು ತರುವಾಗ್ಗೆ ಮದುವೆ ಚಪ್ಪರದ ಹೊರಬಾಗಿಲಿನಲ್ಲಿ
ಏನೋ ಗಲಾಟೆಯಾಯಿತು. ಅಲ್ಲಿದ್ದವರೆಲ್ಲ ಗುಂಪುಕಟ್ಟಿದರು. ಅದನ್ನು
ನೋಡಿ ರಮೇಶ ಅಲ್ಲಿಗೆ ಧಾವಿಸಿದ. ಹೋಗಿ ನೋಡಿ, ಮೊದಲಿಗೆ ಏನನ್ನೂ
ತಿಳಿಯದೆ ಅಚ್ಚರಿಗೊಂಡು ಬೆಪ್ಪನಂತಾದ! ಇಬ್ಬರು ಹೆಂಗುಸರಿದ್ದರು. ಒಬ್ಬಳಿಗೆ
ಮಧ್ಯಪ್ರಾಯ ದಾಟಿರಬಹುದು. ಇನ್ನೊಬ್ಬಳು ಹತ್ತಿಪ್ಪತ್ತು ವರುಷದವಳಾ
ಗಿರಬಹುದು. ತರುಣಿಯು ಬಸುರಿ. ಕಣ್ಣಲ್ಲಿ ನೀರು ತುಂಬಿ ಹರಿಯುತ್ತ
ಲಿತ್ತು. ಪ್ರೌಢೆ ಕೆಂಡದಂತೆ ಕೆಂಪಾಗಿದ್ದಳು. ಕೋಪದಿಂದ ಮಾತುಗಳು

ಬಾಯಿಯಿಂದ ಹೊರಬೀಳುತ್ತಿದ್ದಿಲ್ಲ. ರಮೇಶ ಅವರನ್ನು ಚಪ್ಪರದ ಬಳಿಯಿಂದ ಸ್ವಲ್ಪ ದೂರ ಒಂದು ಬದಿಗೆ ಕರೆದುಕೊಂಡು ಹೋಗಿ ಸಮಾಧಾನಗೊಳಿಸಿದ. ಮತ್ತೆ ಮೆಲ್ಲನೆ ಏನು ಕಥೆ ಎಂದು ವಿಚಾರಿಸಿದ. ಪ್ರೌಢೆಯು ಬಾಯಿಗೆ ಬಂದಂತೆ ಬೊಗಳಿ ಉಮೇಶನನ್ನೂ ಮತ್ತು ಅವನ ಹೆತ್ತವರನ್ನೂ ಮನದಣಿಯುವಷ್ಟು ಬೈದಳು. ತರುಣಿಯು ರಮೇಶನ ಕಾಲಿಗೆ ಬಿದ್ದು, ದಮ್ಮಯ್ಯ ಹಾಕಿ, ತನ್ನನ್ನು ರಕ್ಷಿಸಬೇಕೆಂದು ಬೇಡಿಕೊಂಡಳು. ಆಗ್ಗೆ ಪ್ರೌಢೆಯು ಅಲ್ಲಿದ್ದವರ ಕೈಕುಲುಕಿ ಮದುವೆಯ ಚಪ್ಪರದ ಒಳಗೆ ಹೋಗಲು ಪ್ರಯತ್ನಿಸಿ, ಆಗದೆ ಪೇಚಾಡಿದಳು. ಜನರು ದಾರಿ ಅಡ್ಡಗಟ್ಟಿದುದರಿಂದ ಅವಳಿಂದ ಒಳಗೆ ಹೋಗಲು ಆಗಲಿಲ್ಲ. ರಮೇಶನು ಅವರನ್ನು ಸಮಾಧಾನಗೊಳಿಸಿ, ಬಳಿಯಲ್ಲಿ ಗುಂಪುಕಟ್ಟಿದ್ದ ಜನರನ್ನು 'ಸ್ವಲ್ಪದೂರ ಹೋಗಿರಿ' ಎಂದು ಒತ್ತಟ್ಟಿಗೆ ಮಾಡಿ, 'ನಿಜ ಸಂಗತಿಯನ್ನು ಹೇಳಿರಿ' ಎಂದು ಕೇಳಿದ. ಆಗ ಪ್ರೌಢೆಯು,

"ಇವಳು ನನ್ನ ಮಗಳು. ನಮಗೆ ಸಂಬಂಧಿಕರಾರೂ ಇಲ್ಲ. ಇವಳ ತಂದೆ ಸತ್ತು ಹೋಗಿ ಬಹಳ ವರುಷಗಳಾದುವು. ಅಂದಿನಿಂದ ನಾನು ರಾತ್ರಿಹಗಲು ದುಡಿದು ಇವಳನ್ನು ಸಾಕಿಕೊಂಡು ಬಂದಿರುವೆನು. ಪ್ರಾಯಕ್ಕೆ ಬಂದ ಮೇಲೆ ಇವಳೂ ನನ್ನ ಜತೆ ಕಾಫಿ ಕಾರ್ಖಾನೆಗೆ ಕೆಲಸಮಾಡಲು ಬರುತ್ತಿದ್ದಳು. ಎಲ್ಲಿಯೋ ಇವರಿಬ್ಬರೊಳಗೆ ಸಂಬಂಧವಾಗಿ ಹುಡುಗಿಯ ಮೈ ಬದಲಾಗುತ್ತಾ ಬಂತು. ಅದನ್ನು ತಿಳಿದು, ಸಂಶಯವಾಗಿ ನಾನು ಜೋರು ಮಾಡಿದೆ. ಆಗ ಇವಳು ನಡೆದ ಸಂಗತಿಯನ್ನು ಹೇಳಿದಳು. ಅದರ ಮರುದಿನ ನಿನ್ನ ತಮ್ಮ ಉಮೇಶನು ನಮ್ಮ ಬಿಡಾರಕ್ಕೆ ಬಂದು ಇವರಿಬ್ಬರ ಸಂಬಂಧದ ಕುರಿತಾಗಿ ದೊಡ್ಡ ಪುರಾಣವನ್ನೆ ಬಿಡಿಸಿದ. ಅದು ಸರಿಯಲ್ಲವೆಂದು ನಾನು ಅವನಿಗೆ ಬಹಳವಾಗಿ ಹೇಳಿ ನೋಡಿದೆ. ಆದರೂ ಅವನು ನನ್ನ ಮಾತನ್ನು ಕೇಳದೆ, ಇವಳನ್ನೇ ಮದುವೆಯಾಗುತ್ತೇನೆಂದು ಹಟ ಹಿಡಿದು ಕುಳಿತ. ನಾನು ಅದನ್ನು ನಿನ್ನ ತಂದೆಗೆ ಹೇಳ ಬೇಕೆಂದಿದ್ದೆ. ಅದಕ್ಕೂ ಅವನು ಒಪ್ಪಲಿಲ್ಲ. ಎಲ್ಲಾ ಹಿಂದಿನಿಂದ ತಾನೇ ಮನೆಯವರಿಗೆ ಹೇಳಿ ಸರಿಮಾಡುತ್ತೇನೆಂದು ಭಾಷೆಕೊಟ್ಟ. ನಾನೂ ಮುಂದಕ್ಕೆ ಹೆಚ್ಚಿಗೆ ಮಾತಾಡಲು ಹೋಗಲಿಲ್ಲ. ಯಾಕೆಂದರೆ

ಇವರೊಳಗಿನ ದೇಹಸಂಬಂಧ ಈ ಮೊದಲೇ ನಡೆದು ಹೋಗಿರುವುದೆಂದು ನನಗೆ ತಿಳಿದು ಹೋಯಿತು. ಈಗ ನೋಡು, ಇವಳು ಬಸುರಿ. 'ಮುಂಡೆ ಮಗಾ' ಇವಳನ್ನು ನಡುದಾರಿಯಲ್ಲಿ ಕೈಬಿಟ್ಟು ಅಲ್ಲಿ ಮದುಮಗನಾಗಿದ್ದಾನೆ..." ಎಂದು ಬುಸುಬುಸೆಂದು ಅರ್ಧ ನುಂಗಿ ಅರ್ಧ ಉಗುಳಿ ಹೇಳಿದಳು. ಆಗ ತರುಣಿಯು ಮುಖವನ್ನು ಸೆರಗಿನಿಂದ ಒರಸಿ ಕೊಳ್ಳುತ್ತಾ,

"ಕೂಡದೆಂದರೂ ಹೋಗು ಹೋಗುವಲ್ಲಿಗೆ ನನ್ನ ಬೆನ್ನು ಹಿಡಿದು ಬಂದು ಮದುವೆಯಾಗುತ್ತೇನೆಂದು ಹೇಳಿ, ಒಪ್ಪಿಸಿ ಕೊಂಡರು. ಕಳೆದ ತಿಂಗಳಲ್ಲಿ ನಮ್ಮನ್ನು ನಮ್ಮ ಹಳೇ ಬಿಡಾರದಿಂದ ಬಿಡಿಸಿ ಕದ್ರಿಗೆ ಕರೆದು ಕೊಂಡು ಹೋಗಿ ಅಲ್ಲಿ ಒಂದು ಮನೆಮಾಡಿ ಕೊಟ್ಟದ್ದಾರೆ. ಈ ಮದುವೆ ಸುದ್ದಿ ಈ ಮೊದಲೇ ನಮಗೆ ತಿಳಿದಿದ್ದರೆ, ನಿಮ್ಮ ಬಳಿಗೆ ಬಂದು ಸತ್ಯಸಂಗತಿಯನ್ನು ಹೇಳಿ ಕೊಳ್ಳುತ್ತಿದ್ದೆವು. ನಿನ್ನೆ ರಾತ್ರಿಯಲ್ಲಿಯೇ ನಮಗೆ ಈ ಸುದ್ದಿ ಸಿಕ್ಕಿತು. ಮೊನ್ನೆಯವರೆಗೆ ಅವರು ದಿನಾಲು ಮನೆಗೆ ಬರುತ್ತಿದ್ದರು. ನನ್ನನ್ನು ಅವರು ಹೀಗೆ ಕೈಬಿಟ್ಟು ಹಾಕುವುದಿದ್ದರೆ, ನನ್ನ ಜತೆ ಸಂಬಂಧವೇಕೆ ಬೆಳೆಸಬೇಕಿತ್ತು?" ಎಂದು ಗಳಗಳ ಕಣ್ಣೀರು ಸುರಿಸಿದಳು. ರಮೇಶನಿಂದ ಇದೆಲ್ಲವನ್ನು ನೋಡಲಾಗಲಿಲ್ಲ. ನಿಬ್ಬಣಿಗರ ಸಮಕ್ಷಮದಲ್ಲಿ ಮದುಮಗನ ಮರ್ಯಾದೆ ಕಾಪಾಡುವುದು ಹಿರಿಯನಾದ ಅವನ ಕರ್ತವ್ಯ. ಆದರೆ ಈ ಹೆಣ್ಮಗಳ ಮುಂದಿನ ಅವಸ್ಥೆಯೇನೆಂಬ ವಿಚಾರ ಅವನ ಎದೆಯನ್ನು ನಡುಗಿಸಿ ಬಿಟ್ಟಿತು. ಕಳೆದ ಎರಡು ವರುಷಗಳಿಂದ ಉಮೇಶ ಮನೆಗೆ ಸರಿಯಾಗಿ ಮಲಗಲು ಬರುತ್ತಿರದೆ, ಹೊರಗಿನಿಂದ ಹೊರಗೆ ಏನು ಬೇಟೆಹೊಡೆಯುತ್ತಲಿದ್ದ ಎಂಬುದು ಇಂದು ಸ್ಪಷ್ಟವಾಗಿ ಚಿತ್ರಿತವಾಗಿ ಕಣ್ಣೆದುರಿಗೆ ಬಂದು ನಿಂತಿತು. ಜನರು ತಿಳಿದೂ ತಪ್ಪು ಮಾಡುತ್ತಿರುವುದಾದರೆ ಅವರಿಗೆ ಶಿಕ್ಷೆ ಒದಗಲೇ ಬೇಕು. ಆದರೆ ರಮೇಶ ತನ್ನ ಹೆತ್ತವರನ್ನು ನೆನೆದು ಕಂಗೆಟ್ಟನು. ಧರ್ಮಿಷ್ಠೆ ತಾಯಿಯ ಪರಿಸ್ಥಿತಿ ಏನಾಗಬಹುದೆಂದು ಅವನಿಂದ ಊಹಿಸಿಕೊಳ್ಳಲಾಗಲಿಲ್ಲ. ಮದುವೆಯ ಆಮಂತ್ರಣ ಸ್ವೀಕರಿಸಿ ಹತ್ತು ಗ್ರಾಮದ ಹತ್ತು ರೀತಿಯ ಜನರು ಮದುವೆ ಚಪ್ಪರದಲ್ಲಿ ನೆರೆದಿರುವರು. ಅವರ ಎದುರಿನಲ್ಲಿ ಮನೆತನದ ಮರ್ಯಾದೆ ಹೀಗೆ ಬಿತ್ತರಿಸಲ್ಪಟ್ಟರೆ ಮನೆಯ ಯಜಮಾನರು ಹೇಗೆ

ಮುಖವೆತ್ತಿ ನಡೆಯಬಲ್ಲರು? ರಮೇಶ ಸ್ವಲ್ಪ ತಡೆದು ಆ ತಾಯಿಮಗಳನ್ನು ಮತ್ತೂ ಸ್ವಲ್ಪ ದೂರ ಕರೆದುಕೊಂಡು ಹೋಗಲು ಯತ್ನಿಸುತ್ತಾ,

"ಅಮ್ಮಾ, ನಿಮ್ಮ ಗುರುತು ನನಗಿಲ್ಲ. ನಾನು ಮದುಮಗನ ಅಣ್ಣನೆಂಬುದನ್ನು ನೀವು ತಿಳಿದಿರಲೂ ಸಾಕು. ಈ **'ಗುಲ್ಮಲ'** ದಲ್ಲಿ ಯಾರಾದರೂ ತಪ್ಪುಗಾರರಾಗುವುದಾದರೆ, ಆ ಗುಂಪಿನಲ್ಲಿ ನೀವೂ ಸೇರುತ್ತೀರೆಂದು ನಾನು ಖಂಡಿತವಾಗಿ ಹೇಳಬಲ್ಲೆ. ಅಂದರೆ ನನ್ನ ತಮ್ಮನನ್ನು ಈ ಹೊಣೆಯಿಂದ ತಪ್ಪಿಸಬೇಕೆಂಬ ಕುಟಿಲತನದಿಂದ ಈ ಮಾತನ್ನು ನಾನು ಹೇಳುತ್ತಿರುವುದಲ್ಲ. ಇವರೊಳಗೆ ಗಂಡಹೆಂಡಿರ ಸಂಬಂಧವು ಇಷ್ಟು ಸಮಯದಿಂದ ನಡೆಯುತ್ತಾ ಬಂದಿರುವಂತೆ, ಇಂದು ಇವಳು ಬಸುರಿಯಾಗಿರುವಳು. ಇದೆಲ್ಲವನ್ನು ನೀವು ಹುಡುಗನ ಮನೆಯವರ ಕಿವಿಗೆ ಹಾಕದೆ ಇದ್ದುದು ತೀರಾ ಅನ್ಯಾಯ. ಅದರ ಪ್ರತಿಫಲವನ್ನೇ ನಿಮಗೀಗ ಭೋಗಿಸಲು ಒದಗಿದೆ. ಆದರೂ ಅಬಲೆಯರಾದ ನಿಮ್ಮನ್ನು ದಾರಿಪಾಲಾಗುವಂತೆ ಮಾಡಲು ನಾನು ಎಂದೂ ಇಚ್ಛೆಪಡಲಾರೆ. ನೀವು ನನ್ನ ಮೇಲೆ ನಂಬಿಗೆಯಿಟ್ಟು ನೆಟ್ಟಗೆ ಮನೆಗೆ ಹೋಗಿರಿ. ನೀವು ಈಗ ಏನಾದರೂ ಗಲಾಟೆ ಮಾಡಿದ್ದುದಾದರೆ, ಹುಡುಗನ ಮರ್ಯಾದೆ ಹೇಗೂ ಹೋಗುತ್ತದೆ. ನಮ್ಮ ಮನೆಯ ಹೆಸರೂ ಹಾಳಾಗುತ್ತದೆ. ಅದರೊಟ್ಟಗೆ ನಿಮಗೂ ಏನೂ ಪ್ರಯೋಜನವಾಗದೆ ಹೋಗಬಹುದು. ಆದುದರಿಂದ ಇನ್ನು ಈ **'ಗುಲ್ಮಲ'**ವನ್ನು ಜಾಗ್ರತೆಯಿಂದ ಉಭಯ ಪಕ್ಷದವರಿಗೂ ಹಾನಿ ತಟ್ಟದಂತೆ ಸಮಾಧಾನಗೊಳಿಸುವುದೇ ಉತ್ತಮ. ನೀವು ಹೋಗಿರಿ. ನನ್ನನ್ನು ನಂಬಿಕೊಳ್ಳಿರಿ" ಎಂದು ಹೇಳಿದ. ಅಷ್ಟರಲ್ಲಿ ಮದುಮಗಳ ತಂದೆಯು ಶಾಲನ್ನು ಮೈಗೆ ಸುತ್ತಿಕೊಳ್ಳುತ್ತಾ ಗಡಿಬಿಡಿಯಿಂದ ಅಲ್ಲಿಗೆ ಬಂದರು. ಅವರನ್ನು ಹಿಂಬಾಲಿಸಿಕೊಂಡು ಹಲವು ನಿಬ್ಬಣಿಗರೂ ಬಂದರು. ಆಗ್ಗೆ ಈ ಮೊದಲೇ ಅಲ್ಲಿಗೆ ಬಂದಿದ್ದು ರಮೇಶನ ಹೇಳಿಕೆಯ ಪ್ರಕಾರ ದೂರದೂರ ಸರಿದಿದ್ದ ಕೆಲವರೂ ಹತ್ತಿರ ಬಂದು ಕೂಡಿದರು. ರಮೇಶನಿಗೀಗ ಏನು ಮಾಡಬೇಕೆಂದು ತೋರಿಬರಲಿಲ್ಲ. ಮದುವೆ ಸಮಾರಂಭದಲ್ಲಿ ಮದುವೆ ತೆಗೆದವರಿಗಿಂತಲೂ ಮದುವೆಗೆ ಬಂದವರ ದರ್ಪ ಹೆಚ್ಚಾಗಿರುವ ಸಂಭ

ವವೂ ಇದೆ. ರಮೇಶನು ತುಸು ಆತುರಗೊಂಡವನಂತೆ ಆ ತಾಯಿಮಗಳನ್ನು ಕಳುಹಿಸಿ ಕೊಡಲು ಹವಣಿಸಿದ. ಆಗ್ಗೆ ಅಲ್ಲಿಗೆ ಬಂದವರಲ್ಲಿ ಎಲ್ಲರೂ ಒಮ್ಮೆಗೇ "ಏನು, ಏನು ಕಥೆ?" ಎಂದು ಒಬ್ಬರಹಿಂದೊಬ್ಬರು ಪ್ರಶ್ನೆಗಳನ್ನು ಕೇಳಿದರು. ಅದಕ್ಕೆ ರಮೇಶನು,

"ಏನಿಲ್ಲ. ಬರೇ ನನಗೆ ಸಂಬಂಧಿಸಿದ ವಿಷಯ. ನೀವೆಲ್ಲ ಅದನ್ನು ತಲೆಗೆ ತೆಗೆದುಕೊಳ್ಳುವುದು ಬೇಡ" ಎಂದಂದ.

"ಹೌದು. ನಿನಗೇ ಸಂಬಂಧಿಸಿದ ವಿಷಯ ಆಗಿರಲಿ. ಅವಳು ಕೂಗುತ್ತಿರುವುದೇಕೆ? ಬಸುರಿ ಹೆಣ್ಣುಮಗಳು ಇಂಥಾ ಒಳ್ಳೇ ಕಾರ್ಯದ ದಿನ ನಾಚಿಕೆ ಬಿಟ್ಟು ನಾಲ್ಕು ಜನರ ಎದುರಿನಲ್ಲಿ ನಿಂತಿದ್ದುದೇಕೆ?" ಎಂದು ಮದುಮಗಳ ತಂದೆಯು ದೊಡ್ಡ ನ್ಯಾಯಾಧೀಶರಂತೆ ಕೇಳಿದರು.

"ಒಮ್ಮೆ ಹೇಳಿದೆ ನಿಮಗೆ, ಇದು ನನಗೆ ಸಂಬಂಧಿಸಿದ ವಿಷಯವೆಂದು. ನಿಮಗೆ ಆ ಅಧಿಕಾರ ಬೇಕೇಕೆ? ಬಸುರಿಯನ್ನು ನಾನು ತಿಳಿದಿರುವುದರಿಂದಲೇ ಅವಳು ನನ್ನಲ್ಲಿಗೆ ಬಂದಿರುವಳು. ನೀವು ಹೋಗಿರಿ, ದಯಮಾಡಿ ನಿಮ್ಮ ಕೆಲಸದಲ್ಲಿ ತೊಡಗಿರಿ" ಎಂದು ರಮೇಶ ಕೊಂಚ ಬೇಸರದಿಂದ ಉತ್ತರಿಸಿದ.

ಈಗ ಅವರಿಂದ ಯಾರಿಗೂ ರಮೇಶನಿಗೆ ಉತ್ತರ ಕೊಡಲು ಸಾಧ್ಯವಾಗಲಿಲ್ಲ. ನಿಬ್ಬಣಿಗರೆಲ್ಲರೂ ಮುಖಮುಖ ನೋಡಿಕೊಂಡು ಹಿಂತಿರುಗಿದರು. ಆದರೆ ಪ್ರಾರಂಭದಿಂದಲೂ ಆ ತಾಯಿಮಗಳ ಮಾತುಗಳನ್ನು ಕೇಳಿದ್ದವರೆಲ್ಲರೂ ಬಾಯಿಗೆ ಕೈಹಿಡಿದು ಕಣ್ಣುಗಳನ್ನು ಕರ್ಕಶ ಮುಚ್ಚಿಕೊಂಡರು. ರಮೇಶ ಎಲ್ಲಿಲ್ಲದ ಉಪದ್ರವವನ್ನು ತನ್ನ ತಲೆಯ ಮೇಲೆ ಎಳೆದುಕೊಂಡನು. ಅವನು ಯಾರ ಜತೆಯೂ ಜಗಳಾಡಿ ನಿಷ್ಟುರ ಕಟ್ಟಿಕೊಳ್ಳುವಂಥಾ ಮನುಷ್ಯನಾಗಿರಲಿಲ್ಲ. ಪರಿಸ್ಥಿತಿಯನ್ನು ತಿಳಿದುಕೊಂಡವರೆಲ್ಲಾ ವಿಷಾಧಪಡುವಂತಾದರು. ಅಷ್ಟರೊಳಗೆ ಈ ಸುದ್ದಿಯು ಚಪ್ಪರ ತುಂಬಿ ಮನೆಯೊಳಗೂ ಹೋಗಿತ್ತು. ಸಂಕಣ್ಣ, ಸೀತಕ್ಕ ಎಲ್ಲರೂ ಓಡೋಡಿ ಬಂದರು. ಆಗ್ಗೆ ಆ ತಾಯಿಮಗಳು ಹೊರಟು ಹೋಗಿದ್ದರಾದರೂ ರಮೇಶನು ಮದುವೆ ಚಪ್ಪರದ ಬಾಗಿಲಿಗೆ ತಾಗಿ ಒಂದು ಬದಿಯಲ್ಲಿ ಕಂಬದಂತೆ ನಿಂತಿದ್ದನು. ಮುಖ ಒಣಗಿ ಹೆಣದಂತೆ ಕಳಾಹೀನವಾಗಿತ್ತು. ಸೀತಕ್ಕ ರಮೇಶನನ್ನು ಅಪ್ಪಿಹಿಡಿದುಕೊಂಡು, "ಏನು, ಮಗು! ಏನಾ

ಯಿತು?" ಎಂದು ಆತುರತೆಯಿಂದ ವಿಚಾರಿಸಿದಳು.

"ಏನಾಗಿಲವಮ್ಮಾ, ಕಳವಳಗೊಳ್ಳಬೇಡಿರಿ. ಎಲ್ಲ ವಿಷಯಗಳನ್ನು ಮತ್ತೆ ಹೇಳುತ್ತೇನೆ. ಹೋಗಿರಿ, ನಿಬ್ಬಣಿಗರನ್ನು ಮತ್ತು ಅತಿಥಿಗಳನ್ನು ಅಲ್ಲಿ ಸುಧಾರಿಸುವವರಿಲ್ಲದೆ ಗಲಾಟೆಯಾಗಲೂ ಬಹುದು".

ಎಂದೆಂದು ಹೆತ್ತವರನ್ನು ಸಮಾಧಾನಗೊಳಿಸಿ ರಮೇಶನು ಕಳುಹಿಸಿಕೊಟ್ಟನು. ಆದರೆ, ರಮೇಶನು ಯಾರೋ ಒಬ್ಬಳನ್ನು ಇಟ್ಟುಕೊಂಡಿದ್ದು, ಅವಳು ಈಗ ಬಸುರಿಯಾಗಿದ್ದು ತಮ್ಮೊಳಗಿನ ಸಂಬಂಧವನ್ನು ಎಲ್ಲರಿಗೂ ಗೊತ್ತುಪಡಿಸುವುದಕ್ಕಾಗಿ ಬಂದಿದ್ದಳು; ಎಂಬ ಸುದ್ದಿ ಅಷ್ಟರಲ್ಲಿ ಎಲ್ಲರ ಕಿವಿಗೂ ಮುಟ್ಟಿತ್ತು. ಅದು ತುಳಸಿಯ ಕಿವಿಗೂ ಮುಟ್ಟಿತು. ಅಲ್ಲದೆ ಮದುವೆಗೆ ಬಂದಿದ್ದ ನಾರಾಯಣರಾಯರ ಕಿವಿಗೂ ಮುಟ್ಟಿತು. ತುಳಸಿ ಕೆಂಡದಂತೆ ಕೆಂಪಾಗಿ ಬಂದು ಗಂಡನ ಎದುರಿಗೆ ನಿಂತಳು. ಅವಳ ಬೆನ್ನ ಹಿಂದೆಯೇ ನಾರಾಯಣರಾಯರೂ ನಿಂತಿದ್ದರು. ಈ ಒಂದು ವಿಷಯದಲ್ಲಿ ಅವಳಿಗೆ ರಮೇಶನ ಮೇಲೆ ಎಲ್ಲಿಯವರೆಗೂ ನಂಬಿಗೆಯಿದ್ದ್ದೆ ಇದೆ. ಆದರೆ ಸ್ತ್ರೀಯರ ಸಹಜ ಚಾಂಚಲ್ಯವು ಅವಳನ್ನು ಅಲ್ಲಿಯವರೆಗೆ ಕರೆತಂದಿದೆ. ಈಗ ಏನು ಮಾಡಬೇಕು, ಏನು ಹೇಳಬೇಕೆಂದು ಅವಳಿಗೆ ತಿಳಿಯಲಿಲ್ಲ. ಅದನ್ನು ರಮೇಶನೂ ತಿಳಿದ. ತಿಳಿದು,

"ಮನೆತನದ ಮರ್ಯಾದೆಯ ಪ್ರಶ್ನೆಯಿದು. ನೀನು ಇದಕ್ಕೆ ತಲೆಕೊಟ್ಟು ಬುದ್ಧಿಗೆಡಿಸಿಕೊಳ್ಳಬೇಡ. ನನ್ನ ಜಾಗ್ರತೆ ನನ್ನಲ್ಲಿದೆ. ನೀನು ಹೋಗಿ ನಿನ್ನ ಕೆಲಸ ಮಾಡು" ಎಂದು ಮೈತಟ್ಟಿ

ತುಳಸಿಯನ್ನು ಮನೆಯೊಳಗೆ ಕಳುಹಿಸಿಕೊಟ್ಟ. ಆ ಮೇಲೆ ರಮೇಶನ ಜತೆ ಯಾರೂ ಮಾತಾಡಲು ಬರಲಿಲ್ಲ. ಅವನಿಗೆ ಹಸಿವೆಯೂ ಆಗಲಿಲ್ಲ. ಉಣ್ಣಬೇಕೆಂಬ ಆಸೆಯೂ ಹುಟ್ಟಲಿಲ್ಲ. ಏನು ಮಾಡಿದರೂ ಇನ್ನಿತರ ಹೆಂಗುಸರು ಪಿಸುಪಿಸು ಮಾತಾಡುತಿದ್ದುದರಿಂದ ತುಳಸಿಯ ಕೋಪವೂ ಇಳಿಯಲಿಲ್ಲ. ಸೀತಕ್ಕ ಮಾಡುವ ಕೆಲಸವನ್ನು ಮಾಡುತ್ತಿದ್ದಂತೆ ಕಣ್ಣೀರನ್ನು ಒರಸಿಕೊಳ್ಳುತ್ತಿದ್ದಳು. ಸಂಕಣ್ಣ ಸಂಪೂರ್ಣ ನಿರಾಶೆಗೊಂಡಿದ್ದರು. ಸಂಜೆಯ ಹೊತ್ತಿಗೆ ಊಟತಿಂಡಿ ಮುಗಿದು ನಿಬ್ಬಣ ಮದುಮಗಳ ಮನೆಗೆ ಹೊರಡಲು ಸಿದ್ಧತೆ ನಡೆಯುತ್ತಿತ್ತು. ಕೆಲವರು, ಕತ್ತಲು ಕವಿಯುತ್ತಾ ದೀಪ ಹೊತ್ತಿಸುವ ಹೊತ್ತಿನಲ್ಲಿಯೇ ನಿಬ್ಬಣ ಹೊರಡುವುದೊಳಿತೆಂದೂ; ಇನ್ನು ಕೆಲವರು, ನಿಬ್ಬಣದ ಹೆಜ್ಜೆ ತೀರಾ ನಿಧಾನವಾಗಿರುವುದರಿಂದ ಮಧ್ಯರಾತ್ರಿಗೆ ಹೋಗಿ ಅಲ್ಲಿ ಮುಟ್ಟುವು

ದಕ್ಕಿಂತ ಸ್ವಲ್ಪ ಬೇಗ ಹೊರಟರೆ ಬೇಗ ಹೋಗಿ ಮುಟ್ಟಬಹುದೆಂದೂ ಅಭಿಪ್ರಾಯಪಟ್ಟರು. ಎರಡು ಅಭಿಪ್ರಾಯಗಳಲ್ಲಿಯೂ ಎರಡು ದೃಷ್ಟಿ ಇತ್ತು. ನಿಬ್ಬಣ ಎಷ್ಟು ತಡವಾಗಿ ಹೊರಡುತ್ತದೋ ಅಷ್ಟು ಮದುವೆಯಲ್ಲಿ ಸೂರೆ ಹೋಗಬೇಕೆಂದಿರುವವರಿಗೆ ಅವಕಾಶ ಸಿಗುವುದು. ಮಕ್ಕಳು ಮರಿಗಳೆಲ್ಲ ಇದ್ದವರು ಮಾತ್ರ ಆದಷ್ಟು ಬೇಗ ಹಿಂತಿರುಗಿ ಹೋದರೆ, ಮಕ್ಕಳು ಮರಿಗಳನ್ನು ಉಣ್ಣಿಸಿ ತಿನ್ನಿಸಿ ತಂತಮ್ಮ ಜಾಗ ಸೇರಬಹುದೆಂದೂ ಊಹಿಸಿದರು. ಇಷ್ಟೆಲ್ಲಾ ಗಡಿಬಿಡಿ ನಡೆಯುತ್ತಿರುವಾಗಲೂ ಚಪ್ಪರದಲ್ಲಿ ಒಂದು ಕಡೆ ಮದುವೆಗೆ ಬರುವ ಪರಜಾತಿ ಗೃಹಸ್ಥರಿಗೆ ಕುಳಿತುಕೊಳ್ಳಲು ಮತ್ತು ಚಹಾಫಲಾಹಾರಕ್ಕಾಗಿ ವ್ಯವಸ್ಥೆ ಮಾಡಿರುವಲ್ಲಿ ರಮೇಶನು ಬೆಪ್ಪನಂತೆ ಕುರ್ಚಿಯಲ್ಲಿ ಕುಳಿತು ನೋಡುತ್ತಲಿದ್ದನು. ಮದುವೆಯಾರಂಭದಲ್ಲಿ ಅವನಲ್ಲಿ ತುಂಬಿತುಳುಕುತ್ತಿದ್ದ ಆನಂದಪ್ರಮೋದಗಳೆಲ್ಲ ಎಲ್ಲಿ ತೊಲಗಿ ಹೋಗಿತ್ತೋ ದೇವರಿಗೆ ಗೊತ್ತು.

ಮಬ್ಬು ಕವಿಯುತ್ತಲಿದ್ದಾಗ ನಿಬ್ಬಣ ಹೊರಟಿತು. ನಿಬ್ಬಣದ ಮುಂಭಾಗದಲ್ಲಿ ಬಾಯಿ ಬೊಬ್ಬೆ ಕೇಳ ತೊಡಗಿತು. ಅದನ್ನು ಕೇಳಿ ರಮೇಶನ ಮನಸ್ಸಿನಲ್ಲಿ ಏನೇನೋ ಆಯಿತು. ಕುಳಿತಲ್ಲಿಂದ ಎತ್ತಿಹಾಕಿದಂತಾಯಿತು. ಎದ್ದು ಹೊರಗೆ ಬಂದನು. ನಿಬ್ಬಣ ಮುಂದಕ್ಕೆ ಸಾಗಲಿ ಎಂದು ಹಿರಿಯ ಅನುಭವಸ್ಥರು ಹೇಳುತ್ತಲಿದ್ದರು. ಮುಂಭಾಗದಲ್ಲಿ ದೊಡ್ಡ 'ತಾಲಿಂಬು' ಆಟ ನಡೆದಿತ್ತು. ಲಾಠಿ ಲಟಪಟ ಎನ್ನುತ್ತಲಿತ್ತು. ಶ್ರೀ. ಮಿಸ್ಕಿತರ ಬೇಂಡು ಜೋರಿನಿಂದ ಸಾಗಿತ್ತು. ಶ್ರೀ. ಹುಸೇನಿಬ್ಯಾರಿಯ 'ಗರ್ನಲು' ಕಿವಿಕರಡು ಮಾಡುತ್ತಲಿತ್ತು. 'ದುರುಸುಬಾಣ' ಆಕಾಶ ಬೆಳಗಿಸುತ್ತಲಿತ್ತು. ರಮೇಶ ಎಲ್ಲವನ್ನು ಕಣ್ಣು ಬಿಟ್ಟು ರೆಪ್ಪೆ ಮುಚ್ಚದೆ ನೋಡಿದ. ತಲೆಯಲ್ಲಾಡಿಸಿದ. ಹಿಂತಿರುಗಿ ಮನೆಯ ಒಳಗೆ ಬಂದು ಕುಳಿತುಕೊಂಡ. ಉಮೇಶನು ಕಳೆದ ಎರಡು ವರುಷಗಳಿಂದ ಅಂಗಡಿಯ ಆಡಳಿತೆ ನೋಡುತ್ತಿರುವುದರಲ್ಲಿ ಕೆಲವು ಕಡೆ ತಪ್ಪು ಮಾಡಿದುದನ್ನು ರಮೇಶ ಕಂಡು ಹಿಡಿದಿದ್ದ. ಕೆಲವು ಸಂದರ್ಭಗಳಲ್ಲಿ ಸ್ವತಃ ಸಂಕಣ್ಣನವರೇ ಈ ವಿಷಯವನ್ನು ಹೆಂಡತಿಮಕ್ಕಳ ಗೋಚರಕ್ಕೆ ತಂದಿದ್ದರು. ದೊಡ್ಡ ಸಂಸಾರದ ಜೀವನ ಮತ್ತು ದೊಡ್ಡಸ್ತಿಕೆಯಿಂದ ಬೆಳೆದು ನಿಂತ ಹೆಚ್ಚಿನ ಖರ್ಚು ಅಂಗಡಿಯ ಉತ್ಪತ್ತಿಯಿಂದ ಸಾಗಬೇಕಾದುದು. ಒಮ್ಮೆ ಅಂಗಡಿಗೆ ತಂದು ಹಾಕಿದ ಸಾಮಾನು ಮುಗಿದು ಮತ್ತೊಮ್ಮೆ ಸಾಮಾನುಗಳನ್ನು ತರಬೇಕಾದರೂ ಅಷ್ಟೇ ಹಣ ಬೇಕಾಗುತ್ತದೆ. ಈ ಮೊದಲಿನ ಕ್ರಮದಂತೆ ಸಂಜೆ ಅಂಗಡಿ

ಮುಚ್ಚಿ ದಿನದ ವ್ಯಾಪಾರದ ಹಣವನ್ನು ಉಮೇಶನು ಮನೆಗೆ ತಂದು ಕೊಡು ತ್ತಿದ್ದರೂ, ಆ ಹಣದ ಲೆಕ್ಕ ಹಿಡದು ಅಭಿಪ್ರಾಯ ಪಡುವುದಾದರೆ ಅಂಗಡಿಯ ವ್ಯಾಪಾರ ಈಗೀಗ್ಗೆ ಇಳಿಮುಖವಾಗುತ್ತಾ ಬಂದಿದೆ ಎನ್ನಬಹುದು. ಆದರೆ ಅಂಗಡಿಗೆ ತಂದು ಹಾಕುವ ಸಾಮಾನುಗಳು ಎಂದಿನಂತೆ ಕ್ರಮವಾಗಿ ಮುಗಿಯುತ್ತಿತ್ತಾದ್ದರಿಂದ ಮತ್ತೂ ಸಂಶಯವು ತೋರಿಬಾರದಿರಲಿಲ್ಲ. ಅದ ಕ್ಕಾಗಿ ಈ ಎರಡು ವರುಷಗಳಲ್ಲಿ ಕೆಲವು ಬಾರಿ ಸಂಕಣ್ಣನವರು ಬಂದರಿನ ಬಂಡ ಸಾಲೆಯವರಲ್ಲಿ ಮತ್ತು ಬೇರೆ ಕೆಲವು ಸಾಮಾನು ಸರಬರಾಯಿ ಪೂರೈಕೆ ಮಾಡುವವರಲ್ಲಿ ಜಗಳ ಹಚ್ಚಿಕೊಂಡುದ್ದುಂಟು. ಆದರೆ ಅವರು ಯಾರ ಕೂಡೆ ಕಾಲು ಕೆದರಿ ಜಗಳ ಹಚ್ಚಿದ್ದರೋ ಅವರೇ ಸಂಕಣ್ಣನವರನ್ನು ಸಮಾಧಾನ ಗೊಳಿಸಿ ಕಳುಹಿಸಿಕೊಟ್ಟದ್ದರು. ಅದನ್ನು ರಮೇಶನೂ ಬಲ್ಲನು. ಇಂದು ಅವನಿಗೆ ಅದರ ನಿಜ ಕಥೆಯು ತಿಳಿದು ಬಂತು. ಮನೆಯವರಿಂದ ಹೇಳದೆ ಕೇಳದೆ ಉಮೇಶನು ತನ್ನ ಮದುವೆ ಸಂಭ್ರಮಕ್ಕಾಗಿ ಏನೆಲ್ಲಾ ಸಲಕರಣೆಗಳನ್ನು ಮಾಡಿಕೊಂಡಿರುವನೆಂದು ಇಂದು ಪ್ರತ್ಯಕ್ಷವಾಗಿ ಪ್ರಮಾಣವಾಗಿ ತೋರಿಬರು ವಂತಾಯಿತು. ಇಷ್ಟೇ ಅಲ್ಲದೆ ಗುಪ್ತ ಸಂಬಂಧ ಬೆಳೆಸಿ ಇನ್ನೊಂದು ಸಂಸಾರದ ಖರ್ಚುವೆಚ್ಚವನ್ನು ನೋಡುತ್ತಿರುವನು. ಮತ್ತೂ ಹಲವು ಗೆಳೆಯರನ್ನು ಕಟ್ಟಿ ಕೊಂಡು ಬಯಲಾಟ, ಅಂಕಆಯನಗಳಲ್ಲಿ ಸೂರೆ ಹೋಗುತ್ತಲಿದ್ದ ಸುದ್ದಿಯು ಇಡೀ ಗ್ರಾಮದವರನ್ನೇ ದಿಗಿಲುಗೊಳಿಸಿರುವುದೆಂದು ಹೇಳಬಹುದು. ರಮೇಶನು ಬಹಳ ಹೊತ್ತು ಹಾಗೆಯೇ ಅಲ್ಲಾಡದ ಶಿಲಾಮೂರ್ತಿಯಂತೆ ಕುಳಿತು ಕೊಂಡು ಆಲೋಚಿಸುತ್ತಲಿದ್ದ. ಬೆಳಗ್ಗಿನ ಅಪವಾದದ ಸುದ್ದಿಯಿಂದಾಗಿ ತುಳಸಿ ಮತ್ತು ಸೀತಕ್ಕ ಅರ್ಧ ಸತ್ತಂತಾದವರು ನಿಬ್ಬಣದ ಒಟ್ಟಿಗೆ ಹೋಗಿರಲಿಲ್ಲ. ಸಂಕಣ್ಣ ನವರೂ ಅರ್ಧ ದಾರಿಯ ವರೆಗೆ ಹೋಗಿ, ಮನೆಯ ನೆನಪು ಬಂದು, ನಿರುತ್ಸಾಹ ಗೊಂಡು, ತನ್ನ ಆತ್ಮೀಯ ಸಂಬಂಧಿಕರನ್ನು ತನ್ನ ಪರವಾಗಿ ಆಗಬೇಕಾಗಿರುವ ಕೆಲಸ ಮಾಡಿಕೊಂಡು ಮದುಮಗನ ಜಾಗ್ರತೆ ವಹಿಸಿಕೊಳ್ಳಲು ಕೇಳಿಕೊಂಡು ಹಿಂತಿರುಗಿ ಬರುವಂತಾದರು. ಅವರು ಮದುವೆ ಚಪ್ಪರಕ್ಕೆ ಹಿಂತಿರುಗಿ ಬಂದಾಗ ಎಡಭಾಗದಲ್ಲಿ ರಮೇಶನ ಎದುರಿಗೆ ತುಳಸಿ ಮತ್ತು ಸೀತಕ್ಕ ಮರಣ ಸಂಭವಿ ಸಿದ ಮನೆಯ ಹೆಂಗುಸರಂತೆ ಬಾಡಿ ಕುಳಿತಿದ್ದರು. ಅದನ್ನು ನೋಡಿ ಸಂಕಣ್ಣ ನವರ ಮನಸ್ಸಿನ ಕಳವಳವು ಮತ್ತೂ ಹೆಚ್ಚಿತು. ಅವರೂ ಅಲ್ಲಿಗೆ ಬಂದರು. ಅಲ್ಲಿದ್ದ ಕೆಲವು ಸಂಬಂಧಿಕರು ಮತ್ತು ನೆರೆಹೊರೆಯವರು ಮನೆಯ ಯಜ

ಮಾನರು ಬರುತ್ತಲೇ ತಂತಮ್ಮ ಕೆಲಸಕ್ಕೆ ಹೊರಟು ಹೋದರು! ಸ್ವಲ್ಪ ತಡೆದು ಸಂಕಣ್ಣ ಮೌನವನ್ನು ಮುರಿಯುತ್ತಾ,

"ಏನಿದು? ನೀನೇಕೆ ಇಷ್ಟು ತಣ್ಣಗಾಗಿರುವೆ? ಬೆಳಿಗ್ಗೆ ಮನೆಗೆ ಬಂದಿದ್ದ ಆ ಹೆಂಗುಸರು ಯಾರು?" ಎಂದು ಕೇಳಿದರು.

"ನಾನು ಕೂಡಾ ಅದನ್ನೇ ಕೇಳುತ್ತಿದ್ದುದು. ಅವನು ಏನನ್ನೋ ಹೇಳಿದ. ನನಗದು ತಿಳಿಯಲಿಲ್ಲ. ಜನರು ಏನೇನೋ ಹೇಳಿ ಕೊಂಡರೆಂದು ಇವನೇಕೆ ಬೇಸರದಿಂದಿರುವುದು. ಇವನಂಥ ವರು ಹಾಗೆಲ್ಲಾ ಮಾಡಿದರೆ, ಲೋಕದಲ್ಲಿ ಬೇರೇನು ಉಳಿಯಿತು? ಆ ಸುದ್ದಿ ಬಂದಾಗಲೆ ನಾನು ಹೇಳಿದ್ದೆ, ಅವನು ಎಂದೂ ಅಂಥಾ ಕೆಟ್ಟ ಕೆಲಸ ಮಾಡಲಾರನೆಂದು" ಎಂದು ಸೀತಕ್ಕ ಧ್ವನಿಗೂಡಿಸಿ ದಳು. ಈಗ ರಮೇಶ ತಲೆಯೆತ್ತಿ ಒಮ್ಮೆ ಸುತ್ತಲು ನೋಡಿದ. ಹೆತ್ತವರನ್ನು ಮತ್ತು ಹೆಂಡತಿಯನ್ನು ಕಣ್ಣು ಬಿಟ್ಟು ಮಸುಕಾದ ದೃಷ್ಟಿಯಿಂದ ಕಂಡು,

"ನನ್ನಿಂದ ಅಂಥಾ ಕೆಟ್ಟ ಕೆಲಸವಾಗಲಾರದೆಂಬುದು ನಿಜ. ಆದರೆ ಅಂಥಾ ಅನ್ಯಾಯ ಆಗಬಾರದೆಂದುಂಟೋ?" ಎಂದುಸುರಿದ.

"ಯಾರು ಹೇಳಿದುದು ನೀನು ಅನ್ಯಾಯ ಮಾಡಿದುದು ಎಂದು. ನೀನೇ ಏನೇನೋ ಹೇಳುತ್ತೀಯಪ್ಪ. ಅದು ನನಗೇ ಅರ್ಥವಾಗ ಲಿಲ್ಲ" ಎಂದೆಂದಳು ಸೀತಕ್ಕ.

"ನಿನ್ನ ಊಹೆ ಸರಿಯಾಗಿದೆ ಅಮ್ಮಾ. ಆದರೆ ಆ ಹೆಂಗುಸರು ಹೇಳಿದುದು ಸುಳ್ಳಲ್ಲ. ಅವರಿಗೆ ಕೇಡು ಬಯಸಿದುದು ನಾನಲ್ಲ. ನಮ್ಮ ಉಮೇಶನ 'ಕಿತಾಪತಿ' ಯು ಅವರನ್ನು ಆ ಸ್ಥಿತಿಗೆ ತಂದಿದೆ."

"ಉಮೇಶನೆಂದು ಯಾರು ಹೇಳಿದುದು!" ಎಂದು ಸೀತಕ್ಕ ಅಚ್ಚರಿ ಯಿಂದ ಕೇಳಿದಳು.

"ಯಾರು ಏಕೆ ಹೇಳಬೇಕು. ಅವರಿಬ್ಬರು ನಮ್ಮ ಮನೆ ಬಾಗಿ ಲಿಗೆ ಬಂದು ಕಣ್ಣೀರುಗರೆದುದು ಸಾಕಾಗಲಿಲ್ಲವೇ? ನಾಚಿಕೆ ಬಿಟ್ಟು ನಾಲ್ಕು ಜನರ ಎದುರಿನಲ್ಲಿ ಇನ್ನೊಬ್ಬನೊಟ್ಟಿಗೆ ತನ್ನ ಸಂ ಬಂಧವಿದೆ ಎಂದು ಹೆಣ್ಣು ಒಪ್ಪಿಕೊಳ್ಳಬೇಕಾದರೆ, ಅವಳ ಮನಸ್ಸು ಎಷ್ಟು ನೊಂದಿರಬೇಕು; ಎದೆ ಎಷ್ಟು ಕರಗಿರಬೇಕು; ಪರಿಸ್ಥಿತಿ ಹೇಗಿರಬೇಕೆಂದು ತಿಳಿಯುವುದಿಲ್ಲವೇ?"

“ನೀನು ಇದನ್ನು ನಂಬುತ್ತೀಯಾ?” ಎಂದು ಸೀತಕ್ಕ ಕೇಳಿದಳು. “ನಂಬಿದ್ದರಿಂದಲೇ ಮುಂದಿನ ಆಲೋಚನೆಯನ್ನು ಮಾಡುತ್ತಿರುವೆನು. ಕಳೆದ ಎರಡು ವರುಷಗಳಿಂದ ಅವನು ಸರಿಯಾಗಿ ಮನೆಗೆ ಮಲಗಲು ಬರುತ್ತಿದ್ದಿಲ್ಲ. ಅಂಗಡಿಯ ವ್ಯಾಪಾರದ ಹಣವೂ ಕಡಮೆ ಕಾಣುತ್ತಲಿತ್ತು. ತಂದೆ ಬಂದರದ ಬಂಡಸಾಲೆಯವರಲ್ಲಿ ಅದಕ್ಕಾಗಿ ಹಲವು ಬಾರಿ ಜಗಳ ಮಾಡಿರುವರು. ಈ ಸಂಶಯ ನನಗೆ ಮೊದಲಿನಿಂದಲೇ ಬಂದಿತ್ತು. ಒಂದು ವೇಳೆ ನಾನು ನಿಮಗೆ ಇದನ್ನು ಹೇಳುತ್ತಿದ್ದರೆ, ತುಳಸಿಗೆ ಮತ್ತು ಅವನಿಗೆ ಸರಿಯಿಲ್ಲದಿರುವುದರಿಂದ ತುಳಸಿಯೇ ಹೇಳಿಕೊಟ್ಟು ನಾನು ಅವನ ಮೇಲೆ ಆಪವಾದ ಹೊರಿಸುತ್ತಿರುವೆನೆಂದು ನೀವು ಕೂಡಾ ತಿಳಿದು ಕೊಳ್ಳಲು ಕಾರಣವಾಗುತ್ತಿತ್ತು. ಈ ದಿನದ ಮದುವೆ ಸಂಭ್ರಮವನ್ನು ನೋಡಿದರೆನೇ ನಿಮಗೆ ಸತ್ಯ ಸಂಗತಿ ತಿಳಿಯುತ್ತದೆ. ಮದುವೆಗೆ ಬಂದ ಅತಿಥಿಗಳಿಗೆ ಇಲ್ಲಿ ಬೇಕಾದ ರೀತಿಯಲ್ಲಿ ಸತ್ಕಾರ ಮಾಡಿಯದೆ. ಇದು ಸಾಕಾಗದೆ ಅವನು ಹೊರಗಿನಿಂದ ಗೆಳೆಯರನ್ನು ಹಿಡಿದು ಇನ್ನಿತರ ರೀತಿಯಿಂದಲೂ ಸತ್ಕಾರ ಮಾಡಿದ್ದಾನೆ. ಅಲ್ಲದೆ ಮದುವೆ ಮೆರವಣಿಗೆಯಲ್ಲಿ ಹೀಗೆಲ್ಲಾ ವ್ಯವಸ್ಥೆ ಮಾಡಿರುವನೆಂದು ಅವನು ನಮಗೆಲ್ಲಿ ಸುದ್ದಿ ಕೊಟ್ಟದ್ದಾನೆ! ಇದನ್ನೆಲ್ಲಾ ನೋಡಿಯೂ ಅವನನ್ನು ನಾವು ನಂಬಿಕೊಂಡಿರಬೇಕೇ?” ಎಂದು ಮಾತು ಮುಗಿಸಿ ರಮೇಶ ಮತ್ತೊಮ್ಮೆ ಎಲ್ಲರನ್ನು ನೋಡಿದ. ಅದಕ್ಕೆ ಯಾರೂ ಉತ್ತರ ಕೊಡದ್ದನ್ನು ಕಂಡು,

“ಬೇಡವೆಂದರೂ ಆ ಹೆಣ್ಣು ಮಗಳನ್ನು ಒತ್ತಾಯಗೊಳಿಸಿ, ಮದುವೆಯಾಗುತ್ತೇನೆಂದು ಮಾತುಕೊಟ್ಟು ಸಂಬಂಧ ಬೆಳೆಸಿದ್ದಾನೆ. ಇಲ್ಲಿ ಇವನ ಮದುವೆಯ ವಿಚಾರ ನಡೆಯುತ್ತಿದ್ದಾಗ್ಗೆ ಬಸುರಿಯನ್ನು ಆವಳಿರುತ್ತಿದ್ದ ಬಿಡಾರ ಬಿಡಿಸಿ ಒತ್ತಟ್ಟಿಗೆ ಕರೆದೊಯ್ದು ದೂರವಿಟ್ಟದ್ದಾನೆ. ಯಾವಾಗ್ಗೆ ಅವನು ಆವಳಲ್ಲಿ ಸುಖವನ್ನು ಉಂಡಿರುವನೋ ಅವಳನ್ನು ಮದುವೆಯಾಗಿ ಮನೆಗೆ ತರಬೇಕಿತ್ತು. ಅಲ್ಲದೆ ಇವನು ಈ ಸುದ್ದಿಯನ್ನು ಕೂಡಾ ಯಾರಿಗೂ ತಿಳಿಸಿಲ್ಲ. ಹೀಗೇಕೆ ಮಾಡಬೇಕಿತ್ತು? ಇವನಿಗೂ

ತಂಗಿಯರು ಇದ್ದಾರೆ. ಇವುಗಳನ್ನೆಲ್ಲಾ ಆಲೋಚನೆ ಮಾಡಿ ನಾನು ಆ ತಾಯಿಮಗಳಿಗೆ ಆಶ್ರಯ ಕೊಡುತ್ತೇನೆಂದು ಮಾತು ಕೊಟ್ಟಿರುವೆ" ಎಂದಂದನು.

"ಅಂದರೆ, ಇನ್ನು ಅವರು ನಮ್ಮ ಮನೆಗೆ ಬರಲಿರುವರೋ?" ಎಂದು ಸೀತಕ್ಕ ನಿದ್ದೆಯಿಂದ ಎಚ್ಚತ್ತವಳಂತೆ ಹೌಹಾರಿ ವಿಚಾರಿಸಿದಳು.

"ಅದನ್ನೆ ಆಲೋಚಿಸುತ್ತಿದ್ದೇನೆ. ಅವರ ಬದುಕು ಹಾಳಾಗದಂತೆ ವ್ಯವಸ್ಥೆ ಮಾಡುತ್ತೇನೆಂದು ಮಾತು ಕೊಟ್ಟಿರುವೆನು. ಇನ್ನು ಹೇಳಿದಂತೆ ಮಾಡಿ ತೋರಿಸುವುದು ನನ್ನ ಕರ್ತವ್ಯ. ಬಿತ್ತಿ ಬೆಳೆಯುವವನು ಉಮೇಶನಾದರೂ ಅದರ ಫಲ ಉಣ್ಣಲು ನಾವುಗಳೆಲ್ಲ ಭಾಗಿಗಳಾಗಬೇಕಾಗುತ್ತದೆ." ಎಂದನ್ನುತ್ತಾ ಚಟ್ಟನೆ ಎದ್ದುನಿಂತು ಸಂಕಣ್ಣನವರನ್ನು ಹಿಡಿದುಕೊಂಡನು. ಕುರ್ಚಿಯಲ್ಲಿ ಕುಳಿತಲ್ಲಿಂದಲೇ ತೂಗುಹಾಕಿ ಅವರು ಕೆಳಗೆ ಬೀಳಲಿದ್ದರು. ರಮೇಶನು ತಂದೆಯನ್ನು ಹಿಡಿದುಕೊಂಡು ತುಳಸಿಗೆ, ಒಳಗೆ ಹಾಸಿಗೆ ಬಿಡಿಸಲು ಹೇಳಿದ. ಸಂಕಣ್ಣನವರ ಮೈ ಬಿಸಿಬಿಸಿಯಾಗಿತ್ತು. ಕಣ್ಣುಗಳು ಬಾಡಿದ್ದವು.

ಹಾಗೆ ಹಾಸಿಗೆ ಹಿಡಿದ ಸಂಕಣ್ಣನವರು ಎರಡು ತಿಂಗಳುಗಳ ವರೆಗೆ ಎದ್ದು ನಿಲ್ಲಲಿಲ್ಲ. ಈ ಮಧ್ಯದಲ್ಲಿ ಉಮೇಶನ ಮದುವೆಯ ಪರಿಮಳ ಹಾರಿ ಹೋಗಿತ್ತು. ಮದುಮಗಳು ಗಂಡನ ಮನೆಗೆ ಬಂದು ಹಳಬಳಾಗುತ್ತಾ ಬಂದಿದ್ದಳು! ಹಾಸಿಗೆ ಹಿಡಿದಿದ್ದ ಸಂಕಣ್ಣನವರು ತನ್ನನ್ನು ನೋಡಲು ಬಂದಿದ್ದ ಉಮೇಶನನ್ನು ಎರಡು ಬಾರಿ 'ಕಣ್ಣೆದುರಿನಿಂದ ತೊಲಗಿ ಹೋಗು' ಎಂದು ಓಡಿಸಿದ್ದರು. ಅಂದಿನಿಂದ ಉಮೇಶ ತಂದೆಯನ್ನು ನೋಡಲು ಬರುತ್ತಿದ್ದಿಲ್ಲ. ಅಲ್ಲದೆ ಯೋಗಕ್ಷೇಮವನ್ನು ಕೇಳಿ ತಿಳಿದುಕೊಳ್ಳುತ್ತಿದ್ದಿಲ್ಲ. ಸಂಕಣ್ಣ ಹಾಸಿಗೆಯಿಂದ ಎದ್ದು ನಿಲ್ಲುವ ಹೊತ್ತಿಗೆ ರಮೇಶ, ಉಮೇಶನ ಗುಪ್ತ ಸಂಬಂಧಿಕರಾದ ಆ ತಾಯಿಮಗಳನ್ನು ತನ್ನ ಮಾತಿನಂತೆ ಕರೆಸಿ ಅವರಿಬ್ಬರ ಜೀವನದ ವೆಚ್ಚ ಖರ್ಚಿನ ವ್ಯವಸ್ಥೆಮಾಡಿ ಅವರು ಮೊದಲು ವಾಸಿಸುತ್ತಿದ್ದ ಬಿಡಾರದಲ್ಲಿಯೇ ಇರುವಂತೆ ಮಾಡಿದ. ಇದನ್ನು ಉಮೇಶನಿಂದ ನೋಡಲಾಗಲಿಲ್ಲ. ಅವರ ಕುರಿತು ಏನಾದರೂ ಹೇಳುತ್ತಿದ್ದರೆ, ಆಗಲೆ ಉತ್ತರ ಕೊಡಲು ರಮೇಶ ಸಿದ್ಧನಾಗಿದ್ದಾನೆಂದು ಅವನಿಗೆ ತಿಳಿದುಹೋಗಿತ್ತು. ಅಲ್ಲದೆ ಉಮೇಶನ ಹೆಂಡತಿಗೆ ಈ ವಿಷಯ ಏನೂ ಗೊತ್ತಿರಲಿಲ್ಲ. ಮಾತಿಗೆ ಮಾತು ಬಂದು ಈ ವಿಷಯ

ಹೊರಗೆ ಬಿದ್ದು ಅವಳಿಗದು ಗೊತ್ತಾಗಿ ಹೋದರೆ, ಹೆಂಡತಿ ಮನೆಯವರ ಎದುರಿಗೆ ತಾನು ತಲೆಕೆಳಗೆ ಮಾಡುವ ಸಂದರ್ಭ ಒದಗಬಹುದೆಂದು ಉಮೇಶ ಬಾಯಿ ಬಿಗಿದುಕೊಂಡ. ಆದರೆ ಈ ಮೊದಲಿನಂತೆ ಅಂಗಡಿಯಿಂದ ತನಗೆ ಬೇಕಾದಂತೆ ಹಣ ಜಾರಿಸಲು ಉಮೇಶನಿಂದ ಆಗಲಿಲ್ಲ. ರಮೇಶನೂ ಎಡೆ ಗೊಡುತ್ತಿದ್ದಿಲ್ಲ.

ಸಂಕಣ್ಣ ಹಾಸಿಗೆ ಬಿಟ್ಟು ಹೊರಗೆ ಬಂದರೂ ಮೊದಲಿನಂತೆ ವ್ಯಾಪಾರ ವ್ಯವಹಾರ ನಡೆಸಲು ಶಕ್ತರಾಗಲಿಲ್ಲ. ಈಗ ಸಾಧ್ಯವಿದ್ದ ಕೆಲಸವನ್ನು ರಮೇಶನೇ ಮಾಡತೊಡಗಿದನು. ಅಂಗಡಿಯ ಲೆಕ್ಕಪಟ್ಟಿಯನ್ನು ತಾನೇ ನೋಡಿ ತಂದೆಗೆ ವರದಿ ಮಾಡುತ್ತಾ ಬಂದನು. ಅದರಿಂದಾಗಿ ಉಮೇಶನ ಕಾರ್‍ಬಾರ ಅಂಗಡಿಯಲ್ಲಿ ಸ್ವಲ್ಪ ಕಳೆಗುಂದುವಂತಾಯಿತು. ಇಷ್ಟರಲ್ಲಿ ಉಮೇಶನ ಗುಟ್ಟಿನ ಹೆಂಡತಿ ರಾಮಿ ಗಂಡುಮಗುವಿಗೆ ಜನ್ಮ ಕೊಟ್ಟಳು. ಒಂದು ದಿನ ರಮೇಶ ಉಮೇಶನನ್ನು ಕರೆದು,

"ತಾಯಿ ಮತ್ತು ನೀನು ಒಟ್ಟಿಗೆ ಹೋಗಿ ರಾಮಿಯನ್ನು ನೋಡಿ ಏನಾದರೂ ಕೊಟ್ಟುಬನ್ನಿರಿ. ಬಾಣಂತಿಯರಿಗೆ ಗಂಡನ ಮನೆಯ ಉಡುಗೆರೆಯ ಮೇಲೆ ತುಂಬಾ ಆಶೆಯಿರುತ್ತದೆ. ಮಾಡಬಾರದುದನ್ನು ಮಾಡಿರುವದಾದರೂ ಇನ್ನು ಅವರು ದಾರಿ ಪಾಲಾಗುವಂತೆ ಮಾಡಿ ಪಾಪಕಟ್ಟಕೊಳ್ಳುವುದು ನ್ಯಾಯ ವಲ್ಲ. ಅವಳಿಗೂ ನಿನ್ನನ್ನು ನೋಡುವ ಆಶೆಯಿರಬಹುದು".

ಎಂದು ಹೇಳಿ ಬಾಯ್ಮುಚ್ಚುವುದರೊಳಗೆ,

"ನಾನೇಕೆ ಅಲ್ಲಿಗೆ ಹೋಗುವುದು? ನಾನೇನಾಗಬೇಕು ಅವಳಿಗೆ?"

ಎಂದು ಉಮೇಶ ಮರುನುಡಿದ.

"ಅವಳ ಕೈಹಿಡಿದು ರತಿಸುಖಕ್ಕೆ ಎಳೆಯುವಾಗ್ಗೆ ನೀನು ಇದೇ ಪ್ರಶ್ನೆಯನ್ನು ಸ್ಮರಿಸುತ್ತಿದ್ದರೆ ಬಹುಶಃ ನಿನಗೆ ಉತ್ತರ ಸಿಗಬಹುದಿತ್ತು. ಅಥವಾ ಮದುವೆ ಚಪ್ಪರದಲ್ಲಿ ನಿನ್ನನ್ನು ಕೈಹಿಡಿದು ನಿಲ್ಲಿಸಲು ಬಿಡುತ್ತಿದ್ದರೆ ಈ ಮಾತಿನ ಅರ್ಥವು ಅಲ್ಲಿ ನಿನಗೆ ಚೆನ್ನಾಗಿ ತಿಳಿಯಬಹುದಿತ್ತು. ಹಾಗೆ ಆಗಲು ಬಿಡದಿದ್ದರಿಂದಲೇ ನೀನು ಈ ಪ್ರಶ್ನೆಯನ್ನು ನನ್ನಲ್ಲೇ ಕೇಳುತ್ತಿರುವಿ, ಒಳ್ಳೇದೆ" ಎಂದಂದನು. ಈ ಮಾತಿಗೆ ಉಮೇಶನು ಉತ್ತರವನ್ನೂ

ಕೊಡಲಿಲ್ಲ. ಏನನ್ನು ಹೇಳಲೂ ಇಲ್ಲ. ಹೇಳಬಹುದಿತ್ತೆಂದರೆ, ಸಂಕಣ್ಣನವರು ಅಲ್ಲಿ ಬದಿಯಲ್ಲಿಯೇ ಕುಳಿತುಕೊಂಡಿದ್ದರು. ಸೀತಕ್ಕ ಅವರ ಮೈಗೆ ಎಣ್ಣೆಯನ್ನು ಪೂಸಿ ತಿಕ್ಕುತ್ತಲಿದ್ದಳು.

ಹೀಗೆಯೇ ಇನ್ನು ಕೆಲವು ತಿಂಗಳು ಕಳೆಯುತ್ತಿದ್ದಾಗ ಕಮಲ ಲಲಿತೆಯರು ತಂತಮ್ಮ ಹಸುಗೂಸುಗಳನ್ನು ಹಿಡಿದುಕೊಂಡು ಗಂಡನ ಮನೆಗೆ ಹೋದರು. ಉಮೇಶನ ಹೆಂಡತಿ ಬಸುರಿಯಾಗಿರುವ ಲಕ್ಷಣ ಕಂಡು ಬಂದಿತ್ತು. ತುಳಸಿಯೂ ಬಸುರಿಯಾಗಿ ಹೆರುವುದಕ್ಕಾಗಿ ತವರು ಮನೆಗೆ ಹೊರಟು ಹೋದಳು. ಹೆಂಗುಸರು ಮಕ್ಕಳಿಂದ ತುಂಬಿ ತುಳುಕಿದ್ದ ಮನೆ ಸ್ವಲ್ಪವೇ ದಿನಗಳಲ್ಲಿ ಬರಿದಾದಂತಾಯಿತು. ಗೋಪಾಲ, ಗೋವಿಂದ, ಲಕ್ಷ್ಮಿಯರು ಶಾಲೆಗೆ ಹೊರಟು ಹೋದ ಮೇಲೆ ಮನೆ ಬರಿದಾಗಿ ಶೂನ್ಯವಾಗಿ ಕಾಣುತ್ತಲಿತ್ತು. ಇನ್ನೆರಡು ತಿಂಗಳಲ್ಲಿ ಉಮೇಶನ ಹೆಂಡತಿಯ ಸೀಮಂತದ ಮಾತುಕತೆ ಆರಂಭವಾಯಿತು. ಆಗಲೂ ಸಂಕಣ್ಣ ಎದ್ದು ಮೊದಲಿನಂತೆ ಕೆಲಸ ಮಾಡುವಷ್ಟು ಶಕ್ತರಾಗಿದ್ದಿಲ್ಲ. ಉಮೇಶನ ಹೆಂಡತಿಯ ಸೀಮಂತವಾಗಿ ತವರು ಮನೆಗೆ ಹೋದ ಮೇಲೆ, ಒಂದು ದಿನ ರಮೇಶನು ಉಮೇಶನನ್ನು ಕರೆದು,

"ನೋಡು, ರಾಮಿಯ ಕುರಿತು ನಾವೇನಾದರೂ ವ್ಯವಸ್ಥೆ ಮಾಡದೆ ಹೋದರೆ ದೇವರ ಎದುರಿಗೆ ತಪ್ಪುಗಾರರಾಗಿ ನಿಲ್ಲಬೇಕಾದೀತು. ನಿನ್ನ ಹೆಂಡತಿಯೂ ಈಗ ಮನೆಯಲ್ಲಿಲ್ಲ. ಅಂಗಡಿ ಮುಚ್ಚುವಾಗ್ಗೆ ರಾತ್ರಿಯಾಗುತ್ತಿರುವುದರಿಂದ ನಿನಗೆ ದಿನಾಲೂ ಅಲ್ಲಿಗೆ ಹೋಗಲೂ ಸಾಧ್ಯವಿಲ್ಲ. ಆದ್ದರಿಂದ ರಾಮಿಯನ್ನು ನಮ್ಮ ಮನೆಗೆ ಕರೆಸಿಕೊಂಡರೆ ಒಳ್ಳೇದೆಂದು ನನ್ನ ವಿಚಾರ. ಏನೇ ಇರಲಿ, ಎಲ್ಲರಂತೆ ಹೆಣ್ಣಾದ ಅವಳಿಗೂ ಆಶೆ ಆಕಾಂಕ್ಷೆಗಳಿವೆ". ಎಂದಂದನು.

"ನಿಮಗೆ ಬೇಕಿದ್ದರೆ ಕರೆದುಕೊಳ್ಳಿ. ನನಗೇನು ಅಗತ್ಯವಿಲ್ಲ." ಎಂದು ಉಮೇಶ ಚಟ್ಟನೆ ರಮೇಶನಿಗೆ ಉತ್ತರ ಕೊಟ್ಟನು. ತಮ್ಮನ ಉತ್ತರ ಕೇಳಿ ಅವನ ಮುಖ ಗಂಭೀರವಾಯಿತು.

"ನಮಗೆ ಬೇಕಿದ್ದುದರಿಂದಲೇ ರಾಮಿಯನ್ನು ಕರೆದುಕೊಳ್ಳಬೇಕೆಂದು ಹೇಳುತ್ತಿದ್ದೇನೆ. ನೀನು ಮಾಡಿದ ತಪ್ಪಿಗೆ ನೀನೊಬ್ಬನೇ ಗುರಿಯಾಗುತ್ತಿದ್ದರೆ, ನಾವು ಯಾರೂ ನಿನ್ನನ್ನು ಒತ್ತಾಯಗೊಳಿ

ಸುವ ಗೋಜಿಗೆ ಹೋಗುತ್ತಿದ್ದೆವೋ ಎಂದೆನ್ನಬರುವುದಿಲ್ಲ. ನಿನಗೆ ಈಗ ಅಗತ್ಯವಿಲ್ಲ ನಿಜ. ಒಂದು ಸಮಯ ಅಗತ್ಯವಿತ್ತು. ಅವಳ ಕಾಲ ಬಳಿಗೆ ನೀನು ಹೋಗುತ್ತಿದ್ದೆ. ಈಗ ಅವಳು ನಿನ್ನ ಕಾಲ ಬಳಿಗೆ ಬರಬೇಕೆಂದಿದ್ದರೂ ನೀನು ಅವಳಿಗೆ ಆಶ್ರಯ ಕೊಡಲು ಒಡಂಬಡುವುದಿಲ್ಲ".

"ಆಶ್ರಯ ಕೊಡುವುದು ಅಥವಾ ಕೊಡದಿರುವುದು ಈಗ ದೊಡ್ಡ ಪ್ರಶ್ನೆಯಲ್ಲ. ನೀವು ನಿಮ್ಮ ಮರ್ಯಾದೆಯನ್ನೆ ನೋಡುತ್ತಿರುವಿರಿ. ನಾನೇನು ಮರ್ಯಾದೆಯಿಲ್ಲದವನೋ? ನನ್ನ ಮರ್ಯಾದೆಯನ್ನು ನೀವು ನೋಡುತ್ತಿರುವುದಿಲ್ಲ" ಎಂದು ಉಮೇಶ ತುಸು ಗುದಿಗುದಿಯಿಂದ ಹೇಳಿದ.

"ನಿನ್ನ ಮರ್ಯಾದೆಯನ್ನು ನಾವು ನಮ್ಮ ಮರ್ಯಾದೆಯೆಂದು ತಿಳಿದಿರುವುದರಿಂದಲೇ ನಿನಗೀ ಬೋಧನೆಯನ್ನು ಮಾಡಲು ಮುಂದಾಗಿರುವುದೆಂದು ನೀನು ತಿಳಿಯಬಲ್ಲೆಯಾದರೆ ಇದೇನು ದೊಡ್ಡ ವಿಷಯವಾಗಲಾರದು. ರಾಮಿಯನ್ನು ನಾನು ನೋಡಿರುವೆನು. ಇಂದಿಗೂ ಅವಳು ನಿನ್ನನ್ನೆ ನಂಬಿ ಕುಳಿತಿರುವಳು".

"ಅವಳು ನನ್ನನ್ನು ನಂಬಿ ಕುಳಿತಿದ್ದರೆ, ನನ್ನ ಮಾತಿನಂತೆ ಅವಳು ವರ್ತಿಸುತ್ತಿದ್ದಳು. ಅವಳಿಗೆ ನನ್ನ ಮಾತನ್ನು ಕೇಳುವ ಅಗತ್ಯವಿಲ್ಲ. ಅವಳು ಕದ್ರಿಯಿಂದ ಮನೆ ಕಿತ್ತುಕೊಂಡು ಇಲ್ಲಿಗೇಕೆ ಬರಬೇಕಿತ್ತು? ಇಲ್ಲಿಗೆ ಅವಳು ಯಾರ ಮಾತನ್ನು ನಂಬಿ ಬಂದಿರುವಳೋ ಅವರೇ ಅವಳಿಗೆ ಆಶ್ರಯ ಕೊಡಬಲ್ಲರೆಂಬುದನ್ನು ಅವಳು ನಂಬಿರಬೇಕು".

"ಸರಿ. ನಿನ್ನಂತೆ ಅವಳಿಗೆ ನನ್ನ ಆಶ್ರಯವೂ ಬೇಕಾಗಿದೆ. ನಿನ್ನ ಆಶ್ರಯ ಅವಳಿಗೆ ಬದುಕಿಗಾಗಿ ಬೇಕಾಗಿದ್ದರೆ, ನನ್ನ ಆಶ್ರಯ ಅವಳಿಗೆ ಮನೆತನಕ್ಕಾಗಿ ಬೇಕಾಗಿದೆ. ಹಾಗಾದರೆ ಮಾತ್ರ ಕುಟುಂಬಿಕರೆಲ್ಲ ಒಟ್ಟಾಗಿರಲು ಸಾಧ್ಯವಿದೆ. ಒಂದು ವೇಳೆ ನೀನು ಅವಳನ್ನು ಇನ್ನು ಮುಂದಕ್ಕೆ ನಿನ್ನೊಟ್ಟಿಗೆ ಇಟ್ಟುಕೊಳ್ಳಲು ಆಶಿಸಿದರೂ ನಾನು ಒಪ್ಪದೆ ಹೋದರೆ, ಅವಳಿಗೆ ಈ ಮನೆಯ ಒಳಗೆ ಕಾಲಿಡಲು ಒದಗಲಿಕ್ಕಿಲ್ಲ".

"ಅದು ನನಗೆ ಗೊತ್ತಿಲ್ಲ. ನನಗೇನನ್ನೂ ಹೇಳಬೇಡಿರಿ. ಅವಳು ನನ್ನ ಮಾತನ್ನು ಕೇಳಿ ನಡೆಯಲೂ ಇಲ್ಲ. ನನಗೆ ಅವಳು ಇನ್ನು ಬೇಕಾಗಿಯೂ ಇಲ್ಲ" ಎಂದಂದ ಉಮೇಶ.

"ಉಮೇಶ ಹಾಗೆಲ್ಲ ನುಡಿಯಬೇಡ, ನೋಡು. ಇದು ಧರ್ಮವಲ್ಲ. ನಿನ್ನ ಮದುವೆಯ ಹೆಂಡತಿ ತವರು ಮನೆಯಿಂದ ಬರುವಾಗ್ಗೆ ನಾಲ್ಕು ದಿನ ತಡಮಾಡಿದರೆ ನೀನು ಅವಳನ್ನು ಬಿಟ್ಟು ಬಿಡುತ್ತೀಯೇನು? ಅಥವಾ ಅವಳು ಉಣ್ಣುವಾಗ್ಗೆ, ಉಡುವಾಗ್ಗೆ ಯಾವಾಗಲೂ ನಿನ್ನ ಸಲಹೆ ಕೇಳುತ್ತಿರುವಳೇನು? ನೀನು ಅವಳ ಕೂಡೆ ಕೇಳಿ ಏನೊಂದು ಕೆಲಸವನ್ನು ಮಾಡುತ್ತಿರುವಿಯೇನು? ಹೆಣ್ಣು ಸಾಮಾಜಿಕ ಕಟ್ಟಳೆಯನ್ನು ಮುರಿದು ವರ್ತಿಸಿದರೆ, ಧರ್ಮವನ್ನು ಬಿಟ್ಟು ನಡೆದರೆ ನಿನ್ನ ಅಭಿಪ್ರಾಯವನ್ನು ನಾನು ಒಪ್ಪುವೆನು. ರಾಮಿಯಲ್ಲಿ ಅಂಥಾ ಯಾವದೊಂದು ದೋಷವನ್ನು ಹುಡುಕಿ ಕೊಡಲು ನಿನ್ನಿಂದ ಸಾಧ್ಯವಿದೆಯೇನು? ನಿನ್ನ ಮರ್ಯಾದೆಯನ್ನು ನಾವು ಅಲ್ಲಗಳೆಯುತ್ತಿರುವೆವೆಂದು ನೀನೀಗ ತಿಳಿಯಬಹುದು. ರಾಮಿ ನಮ್ಮ ಮನೆಗೆ ಬಂದು, ಅವಳು ಮಾಡಿ ಬಡಿಸಿದ ಅಡಿಗೆಯನ್ನು ನಿನ್ನಂತೆ ನಾವು ಕೂಡಾ ಉಂಡಾದ ಮೇಲೆಯೂ ನಿನ್ನ ಮರ್ಯಾದೆಯ ಪ್ರಶ್ನೆಯು ನಮ್ಮನ್ನು ಬಿಟ್ಟು ಇರಬಹುದೇನು?" ಎಂದು ರಮೇಶನು ಕನಿಕರದಿಂದಲೂ ಕಠೋರವಾಗಿಯೂ ನುಡಿದ.

"ಅದೇನು ನನಗೆ ಗೊತ್ತಿಲ್ಲ. ನಿಮಗೆ ತಿಳಿದಂತೆ ಮಾಡಿರಿ".

"ತಿಳಿದಂತೆ ಏನು ಮಾಡಬೇಕು, ಉಮೇಶ?"

"ನಿಮಗೆ ಅವಳು ಬೇಕಾಗಿದ್ದಾಗ ನಾನು ಏನು ಮಾಡಲು ಸಾಧ್ಯವಿದೆ?"

"ನಮಗೆ ಅವಳು ಬೇಕಾಗಿರುವಳು ಎಂದರೆ! ನಿನಗೆ ಬೇಡವೇ?"

"ನನಗೆ ಬೇಡ".

"ಏನಂದೆ! ನಿನಗೀಗ ರಾಮಿಯು ಬೇಡವೇ? ಮತ್ತೇಕೆ ನೀನು ಅವಳನ್ನು ಕೆಡಿಸಿರುವಿ?"

"ಅದನ್ನು ನಿಮ್ಮ ಕೈಯಲ್ಲಿ ಕೊಟ್ಟಿಲ್ಲ".

 

"ಉಮೇಶ, ನಾಲಗೆ ಹಿಡಿದು ಮಾತಾಡು. ತಾಯಿಗೆ ನೀನು ಒಬ್ಬನೇ ಮಗನಲ್ಲ. ನಿನಗೂ ಅಣ್ಣತಮ್ಮಂದಿರು ಮತ್ತು ತಂಗಿಯರು ಇದ್ದಾರೆ. ಅವರಿಗೂ ಎಲ್ಲರಂತೆ ಬದುಕಬೇಕಾಗಿದೆ. ಈ ಮನೆಯು ನನ್ನೊಟ್ಟಿಗೆ ಮತ್ತು ನಿನ್ನೊಟ್ಟಿಗೆ ಮುಳುಗಿ ಹೋಗಲಾರದು. ನಮ್ಮ ಮುಂದಿನವರು ಈ ಮನೆಯಲ್ಲಿ ಅವರ ಮುಂದಿನವರಿಗಾಗಿ ಬದುಕು ಮಾಡಬಲ್ಲರು. ರಾಮಿಯ ಕಣ್ಣೀರು ನಿನ್ನೋರ್ವನ ತಲೆಯಲ್ಲಿಯೇ ಬಿದ್ದು ಬತ್ತಿಹೋಗುತ್ತಸೆಂದಲ್ಲ. ಕಣ್ಣೀರುಗರೆದ ಕಣ್ಣಿನ ಕಿಡಿಯು ನಮ್ಮೆಲ್ಲರ ಮುಖದ ಮೇಲೆಯೂ ಬಿದ್ದು ಸುಡಬಹುದು. ಏನೆಂದು ತಿಳಿದೆ?"

"ಏನನ್ನೂ ತಿಳಿದಿಲ್ಲ. ನೀವು ಉದ್ದುದ್ದ ಭಾಷಣವನ್ನು ಮಾಡಿದರೆ, ನಾನು ತಲೆಯಲ್ಲಾಡಿಸುವೆನೆಂದು ತಿಳಿಯಬೇಡಿರಿ. ಅವಳಿಗೆ ಬೇಕಾಗಿದ್ದರೆ ನಾನಾಗಿರುವಂತೆ ಅವಳೂ ಬೇರೆ ಮದುವೆಯನ್ನು ಮಾಡಿಕೊಳ್ಳಲಿ. ಅಥವಾ ನಿಮಗೆ ಬೇಕಿದ್ದರೆ ನೀವೇ ಅವಳನ್ನು ಇಟ್ಟುಕೊಳ್ಳಿಂ".

"ಮೂರ್ಖಾ, ಏನಂದೆ. ನಾನು ಅವಳನ್ನು ಇಟ್ಟುಕೊಳ್ಳಬೇಕೆ?"

"ಮನಸ್ಸಿಗೆ ತೋರಿದಂತೆ ಮಾಡಿಕೊಳ್ಳಿರಿ. ನನಗೆ ಏನನ್ನೂ ಹೇಳುವುದು ಅಗತ್ಯವಿಲ್ಲ".

"ನೀನು ನಮ್ಮ ಮಾತನ್ನು ಕೇಳುವುದಿಲ್ಲವೋ?"

"ಮನೆಯ ವಿಷಯವನ್ನು ಬಿಟ್ಟು ಲೋಕದ ವಿಷಯವನ್ನು ಮಾತಾಡುವ ಅಗತ್ಯ ಯಾರಿಗೂ ಇಲ್ಲ. ಇದ್ದರೆ, ಅದನ್ನು ಕೇಳಿ ನಡೆಯಬೇಕೆಂಬ ಕಟ್ಟಳೆಯಿಲ್ಲ". ಆಗ್ಗೆ ಸಂಕಣ್ಣನವರು ಮಧ್ಯಕ್ಕೆ ಬಂದು,

"ಅವನು ಹೇಳುವುದರಲ್ಲಿ ನಿನಗೇನು ಹಾನಿಯಿದೆ? ಮದುವೆಯಾಗಲು ಮನಸ್ಸಿಲ್ಲದವನು ಅವಳ ಕೂಡೆ ಸಂಬಂಧ ಬೆಳೆಸಲು ಏಕೆ ಹೋಗಿರುವಿ?" ಎಂದು ಕೇಳಿದರು.

"ಅವಳ ಜತೆ ನನ್ನ ಸಂಬಂಧವಾಗಿರುವುದರಿಂದ ನಿಮಗೇನು ಹಾನಿ ತಟ್ಟಿತು?" ಎಂದು ಉಮೇಶ ಅವರಿಗೆ ಮರುತ್ತರ ಕೊಟ್ಟನು.

"ನೀನು ಹಾಗೆ ಮಾಡಿದುದು ಸರಿಯೇನು?"

"ಮಾಡುತ್ತೇನೆ, ಮಾಡದೆ ಇರುತ್ತೇನೆ. ಆ ವಿಷಯ ನಿಮಗೆ ಬೇಡ. ಅವಳಂಥವರು ಬಹಳ ಮಂದಿಯಿದ್ದಾರೆ. ಅವರೆಲ್ಲ ರನ್ನೂ ನೀವು ಉದ್ಧಾರಗೊಳಿಸುವಿರಾ?"

"ಎಲ್ಲರ ಪ್ರಶ್ನೆಯನ್ನು ಬಿಡಿಸುವ ಮಾತಂತಿರಲಿ. ರಾಮಿಯ ಸಮಸ್ಯೆ ಯನ್ನು ಪರಿಹಾರಗೊಳಿಸಲು ನಮ್ಮಿಂದ ಆಗುವುದಿಲ್ಲ. ಹೀಗಿರು ವಾಗ್ಗೆ ಲೋಕದ ಸಮಸ್ಯೆಯನ್ನು ಬಿಡಿಸಲು ನಾವು ಅರ್ಹರಾಗ ಬಲ್ಲೆವೋ?" ಎಂದು ಸಂಕಣ್ಣ ತುಂಬಾ ವ್ಯಥಿತರಾಗಿ ಕೇಳಿದರು.

"ಅದೇನೂ ನನಗೆ ಗೊತ್ತಿಲ್ಲ" ಎಂದಂದು ಉಮೇಶ ಹೊರಗೆ ಹೊರಟು ಬಂದ. ಸಂಕಣ್ಣ ಅವನನ್ನು ಹಲವು ಬಾರಿ ಕರೆದರು. ಆಗಲೂ ಅವನು ಹಿಂತಿರುಗಿ ನೋಡಲಿಲ್ಲ. ಉಮೇಶ ಹೊರಟು ಹೋದ ಮೇಲೆ ಅವರು ನಿಂತಲ್ಲಿಯೇ ಕದಲದೆ ಬಹಳ ಸಮಯ ನಿಂತಿದ್ದರು. ಕಣ್ಣುಗಳು ಬಾಡುತ್ತಾ ಬಂದು ಹನಿಗೂಡಿದವು. ರಮೇಶ ಅವರ ಕೈಹಿಡಿದು ಒಳಗೆ ಕರೆದುಕೊಂಡು ಹೋದನು.

ಈ ಘಟನೆ ನಡೆದು ಬಹಳ ದಿನಗಳಾದುವು. ಅಂದಿನಿಂದ ಸಂಕಣ್ಣ ಹಾಸಿಗೆ ಬಿಟ್ಟು ಹೊರಗೆ ಬರಲಿಲ್ಲ. ಬರುವ ಡಾಕ್ಟರರೆಲ್ಲ ಬಂದು ಹೋದರು. ಆಗುವ ಮದ್ದು ಆಗಿ ಹೋಯಿತು ನೋಡುವವರೂ ಬಂದು ನೋಡಿದರು. ಸಂಕಣ್ಣನವರ ಆರೋಗ್ಯದಲ್ಲಿ ಗುಣ ಕಾಣಲಿಲ್ಲ. ತುಳಸಿ ಮೊನ್ನೆಯೇ ತವರು ಮನೆಯಿಂದ ಬಂದಿರುವಳು. ಸಂಕಣ್ಣ ಅವಳನ್ನು ಕರೆದು ಕಣ್ತುಂಬ ನೋಡಿ ದರು. ಹೆಂಡತಿಯನ್ನು ಬಳಿಯಲ್ಲಿ ಕುಳ್ಳಿರಿಸಿ, ಸೊಸೆಯ ಕೈಯಿಂದ ಬಾಯಾ ರಿಕೆ ತೆಗದುಕೊಂಡರು. ರಮೇಶ ಆಗಲೇ ಹೊರಗಿನಿಂದ ಬಂದು ಏನೋ ಮದ್ದನ್ನು ಕಲಸುತ್ತಲಿದ್ದನು. ಆಗ್ಗೆ ಸಂಕಣ್ಣ ಎಲ್ಲರನ್ನು ಆರೋಗ್ಯವಂತರಂತೆ ಉತ್ಸಾಹದಿಂದ ಕರೆದು, ನಗುತ್ತಾ ಕಣ್ಣು ಮುಚ್ಚಿದರು. ಮುಚ್ಚಿದ ಕಣ್ಣು ಮತ್ತೆ ತೆರೆಯಲಿಲ್ಲ. ಸೀತಕ್ಕನ ಹಣೆಯ ಕುಂಕುಮವನ್ನು ಒರಸಿ ಕೈಯ ಬಳೆ ಯನ್ನು ಒಡೆಯಲಾಯಿತು. ಇದಾದ ಸ್ವಲ್ಪ ದಿನಗಳಲ್ಲಿಯೇ ಜಾಗತಿಕ ಎರ ಡನೇ ಮಹಾಯುದ್ಧ ಆರಂಭವಾಯಿತು.

* * * * *

ಸಂಕಣ್ಣನವರು ತೀರಿಕೊಂಡ ಮೇಲೆ ಮನೆಯ ಕಾರಭಾರದಲ್ಲಿಯೂ ಅಷ್ಟೇ ಅವ್ಯವಸ್ಥೆಯುಂಟಾಯಿತು. ರಮೇಶನು ಕೆಲವು ದಿನಗಳ ವರೆಗೆ ಬೇರೆ ಯಾವ

ದೊಂದು ಕೆಲಸವನ್ನೂ ಮುಟ್ಟಿ ನೋಡಲಿಲ್ಲ. ಸಂಕಣ್ಣ ಕಾಯಿಲೆಯಿಂದ ತೀರಿಕೊಂಡಿದ್ದರೆ, ಅವನು ಇಷ್ಟು ನಿರಾಶನಾಗುತ್ತಿದ್ದನೆಂದು ಹೇಳಲಿಕ್ಕಾಗುವುದಿಲ್ಲ. ಮಕ್ಕಳೊಳಗಿನ ವಾಗ್ಯುದ್ಧ ಅವರ ಮನಸ್ಸನ್ನು ನೋಯಿಸಿರಬೇಕು. ಕಡೆಗೆ ಅದೇ ನೋವಿನಿಂದ ಅವರು ಅಂತ್ಯವನ್ನು ಕಂಡರು. ಮಕ್ಕಳು ಹೆತ್ತವರ ಮಾತನ್ನು ಮಿಕ್ಕಿ ನಡೆದರೆ ಹೆತ್ತವರ ಮೇಲೆ ಅದು ಎಂಥಾ ಪರಿಣಾಮವನ್ನು ಮಾಡಬಹುದೆಂಬುದನ್ನು ರಮೇಶನೀಗ ಕಂಡುಕೊಂಡ. ನೊಂದು ಕರಗಿದ. ಆದರೆ ಉಮೇಶನು ಅದನ್ನು ಕಂಡುಕೊಳ್ಳಲಿಲ್ಲ. ಕಂಡುಕೊಳ್ಳುವಷ್ಟು ಉದಾರತನವನ್ನು ತೋರಿಸಲಿಲ್ಲ. ಅದಕ್ಕೆ ಬದಲಾಗಿ ತಾನೇ ತನ್ನ ಸ್ವಂತ ವಿಚಾರದ ಮೇಲೆ ಅಂಗಡಿಯ ಆಡಳಿತೆಯನ್ನು ನಡೆಸಿದನು. ರಮೇಶನು ತಂದೆಯ ಉತ್ತರಕ್ರಿಯಾಸಂಸ್ಕಾರಗಳನ್ನು ಮುಗಿಸಿಕೊಂಡು, ತಾಯಿ, ಬಂಧುಭಗಿನಿಯರನ್ನು ಸಮಾಧಾನಗೊಳಿಸಿ, ತಂದೆಯ ಮರಣಕ್ಕಾಗಿ ಬಂದಿದ್ದ ಕಮಲ ಲಲಿತೆಯರನ್ನು ಕರೆದುಕೊಂಡು ಹೋಗಿ ಅವರವರ ಗಂಡನ ಮನೆಯಲ್ಲಿ ಬಿಟ್ಟು ಬಂದು, ಮೊದಲಿನಂತೆ ಕಾರ್ಯಾಸಕ್ತನಾಗುವ ಹೊತ್ತಿಗೆ ಅವನು ಮತ್ತು ಉಮೇಶನೊಳಗೆ ಬಹಳ ಅಂತರವು ಮೂಡಿತ್ತು. ಆದರೂ ಅವನು ಅಣ್ಣತಮ್ಮಂದಿರೊಳಗಿನ ಮನೋಭೇದವನ್ನು ಯಾರಿಗೂ ತೋರಗೊಡಲಿಲ್ಲ. ದಿನಗಳು ಉರುಳುತ್ತಿದ್ದಂತೆ ರಮೇಶನು ಮನ್ಸಸಿನ ಬೇನೆಯನ್ನು ನುಂಗಿಕೊಂಡು ಕಾಲ ಸಾಗಿಸಿದನು.

ಸಂಕಣ್ಣನವರು ತಮ್ಮ ಬದುಕಿನಲ್ಲಿಟ್ಟುಕೊಂಡಿದ್ದ ವ್ಯಾಪಾರ ವಹಿವಾಟು ಬಹಳ ದಿನಗಳಿಂದಲೂ ಇಳಿಮುಖವಾಗುತ್ತಾ ಬಂದಿತ್ತು. ರಮೇಶ ಅವರ ವ್ಯವಹಾರವನ್ನು ಸಾಧ್ಯವಿದ್ದಷ್ಟು ರೀತಿಯಿಂದ ಮುಂದರಿಸಿಕೊಂಡು ಬಂದಿದ್ದ. ಈಗ ಉಮೇಶನ ಸ್ವತಂತ್ರ ಬುದ್ಧಿಯು ಅವನನ್ನು ಎಚ್ಚರಿಸಿ ಬಿಟ್ಟಿತು. ತಂದೆಯ ವ್ಯವಹಾರವನ್ನು ಮುಂದರಿಸಿಕೊಂಡು ಹೋಗಲು ಸಾಧ್ಯವಿಲ್ಲವೆಂಬುದನ್ನು ಸ್ವತಃ ಅವನೇ ಒಪ್ಪುತ್ತಿದ್ದ. ವ್ಯಾಪಾರಿಗಳ ನಾಲಗೆ ಯಾವಾಗಲೂ ತೆಳ್ಳಗಿರಬೇಕಾಗುತ್ತದೆ. ಆತ್ಮೀಯ ಸಂಬಂಧಿಕರಲ್ಲಿಯೂ ಒಮ್ಮೊಮ್ಮೆ ವ್ಯಾಪಾರದ ಮಟ್ಟವನ್ನು ಮರೆಮಾಜಬೇಕಾಗುತ್ತದೆ. ರಮೇಶನ ಹೃದಯ ಅಂಥದಲ್ಲ. ಕಪಟ ಮರೆಮೋಸ ಅವನಿಗೆ ಎಂದೂ ಸೇರದು. ತನ್ನಂತೆ ಎಲ್ಲರೂ ಎಂಬ ಭಾವನೆಯೇ ಅವನಲ್ಲಿ ಹಿರಿದು. ಉಮೇಶನು ಹಾಗಲ್ಲ. ಒಂದು ವೇಳೆ ಉಮೇಶನೇ ಮನೆಯ ಹಿರಿಯನಾಗುತ್ತಿದ್ದರೆ, ತಂದೆಯ ವ್ಯವಹಾರವನ್ನು

ಇನ್ನೂ ಹೆಚ್ಚಿನ ಜೋರಿನಿಂದ ನಡೆಸಬಹುದಿತ್ತು! ಆದರೂ ಅವನು ಅಂಗಡಿಯ ಆಡಳಿತೆಯನ್ನು ಚೆನ್ನಾಗಿಯೇ ಸಾಗಿಸುತ್ತಿರುವನೆಂದೇ ಹೇಳಬಹುದು. ಅಣ್ಣ ಮತ್ತು ತಾಯಿಯ ಸಲಹೆಗಳನ್ನು ಕೇಳಿಕೊಂಡು ಅವನು ಅಂಗಡಿಯ ವ್ಯವಹಾರವನ್ನು ನಡೆಸುತ್ತಿದ್ದರೆ ಮನೆಯಲ್ಲಿ ಯಾರೂ ಅವನನ್ನು ಎದುರಿಸಲು ಹೋಗುತ್ತಿದ್ದಿಲ್ಲ. ಈ ಮಧ್ಯೆ ರಮೇಶನು ಆಗಾಗ್ಗೆ ಅಂಗಡಿಗೆ ಹೋಗಿ ಅಲ್ಲಿ ಮಾಡಲಿರುವ ಕೆಲವು ಕೆಲಸಗಳನ್ನು ಮಾಡಿ ಬರುತ್ತಿದ್ದ. ಉಮೇಶನು ಬಾಯಿಬಿಟ್ಟು ಮಾತಾಡದಿದ್ದರೂ ತಾನೇ ಮುಂದಾಗಿ ಮಾತಾಡಿ ತಿಳಿಯ ಬೇಕಾದುದನ್ನು ಕೇಳಿ ತಿಳಿದುಕೊಳ್ಳುತ್ತಿದ್ದ. ಈಗ್ಗೆ ಯುದ್ಧವು ಜೋರಿನಿಂದ ಸಾಗುತ್ತಿದ್ದುದರಿಂದ ಬೆಲೆಯು ಮೆಲ್ಲಮೆಲ್ಲನೆ ಏರುತ್ತಾ ಸಾಗಿತ್ತು. ಅಂಗಡಿಯ ವ್ಯಾಪಾರವೂ ಬೆಳೆಯುತ್ತಾ ಬಂದಿತ್ತು. ಆದರೆ ಸಂಕಣ್ಣನವರ ವ್ಯವಹಾರವು ದಿನಹೋದಂತೆ ರಮೇಶನಿಂದ ಸಾಗದೆಹೋಗಿ ಕಡಮೆಯಾಗುತ್ತಾ ಬಂತು.

ಹೀಗೆಯೇ ಇನ್ನೊಂದು ವರುಷ ಕಳೆಯಿತು. ಈ ಮಧ್ಯದಲ್ಲಿ ಅಣ್ಣ ತಮ್ಮಂದಿರೊಳಗೆ ಒಂದು ದಿನ ನಾಲ್ಕು ಬಿಸಿಬಿಸಿ ಮಾತು ಎದುರೆದುರಾಗಿತ್ತು. ಅಂದು ಉಮೇಶ ರಮೇಶನಿಗಿಂತಲೂ ಸ್ವಲ್ಪ ಹೆಚ್ಚಾಗಿ ಮಾತಾಡಿದ್ದ. ಸೀತಕ್ಕ ಅವರ ಮಧ್ಯಕ್ಕೆ ಬಂದು ನಿಂತುದುದರಿಂದ ರಮೇಶ ಹೆಚ್ಚಿಗೆ ಮಾತಾಡಲು ಹೋಗಿರಲಿಲ್ಲ. ತಾಯಿಯ ಕಣ್ಣೀರು ಅವನ ಬಾಯಿಯನ್ನು ಬಿಗಿಹಿಡಿದಿತ್ತು. ಅಂದು, ಹೆತ್ತತಾಯಿ

"ನೋಡುವವರು ಏನೆಂದು ಹೇಳಿಯಾರು ರಮೇಶ? ಅವನಿಗೆ ಬುದ್ಧಿಯಿಲ್ಲವೆಂದು ನಿನಗೂ ಬುದ್ಧಿಯಿಲ್ಲವೇ?" ಎಂದು ಹೇಳಿದ್ದುದು ಈಗಲೂ ರಮೇಶನ ಕಿವಿಯೊಳಗೆ ಪ್ರತಿಧ್ವನಿಸುತ್ತಿತ್ತು. ರಮೇಶನು ಮನಸ್ಸು ಮಾಡಿದ್ದರೆ ಈಗಲೂ ಅಂಗಡಿಯ ಆಡಳಿತೆಯನ್ನು ತನ್ನ ಕೈಗೆ ತೆಗೆದು ಕೊಳ್ಳ ಬಹುದಿತ್ತು. ಹಾಗೆ ಮಾಡಿದ್ದುದಾದರೆ ಉಮೇಶನು ಮತ್ತೆ ಅಲ್ಲಿ ನಿಲ್ಲುವಂತಿಲ್ಲ. ಅಂಗಡಿಯ ಆಡಳಿತೆಯಲ್ಲಿ ಕೈಪಳಗಿದಂತೆ ಉಮೇಶನ ಸಣ್ಣ ಸಣ್ಣ ಅಭ್ಯಾಸ ಈಗ ಬೆಳೆದು ನಿಂತಿದೆ. ಎಲ್ಲಿಯಾದರೂ ಬಯಲಾಟವಾಗುತ್ತಿದ್ದರೆ ಗೆಳೆಯರನ್ನು ಕಟ್ಟಿಕೊಂಡು ಮೊದಲು ಅವನು ನೋಡಲು ಹೋಗುತ್ತಿದ್ದ. ಈಗ್ಗೆ ಅವನಾಗಿಯೇ ಮೇಳದವರಿಗೆ ವೀಳ್ಯಕೊಟ್ಟು ಕರೆಸಿ ಬಯಲಾಟ ಮಾಡಿಸುವುದುಂಟು. ಸಣ್ಣ ಸಣ್ಣ ಜಗಳದಲ್ಲಿ ಕಾಯಕ ನಡೆಸುವುದುಂಟು. ಸ್ವಲ್ಪ ಸ್ವಲ್ಪ ಕುಡಿಯುವ ಅಭ್ಯಾಸ ಬೆಳೆದು ಯಾವಾಗಲೊಮ್ಮೆ

ತಲೆಗೇರಿಸಿ ಮೈಮುರೆಯುವುದೂ ಉಂಟು. ಇದನ್ನೆಲ್ಲವನ್ನು ರಮೇಶನಿಂದ ನೋಡಲಾಗುತ್ತಿದ್ದಿಲ್ಲ. ಇದನ್ನು ತಡೆ ಹಿಡಿಯಲು ಸಾಧಿಸುವುದೂ ಸರಿ, ಉಮೇಶನನ್ನು ಮನೆಯಿಂದ ಹೊರಗೆ ದೂಡುವುದೂ ಸರಿ. ಅವನನ್ನು ಮನೆಯಿಂದ ಹೊರಗೆ ಹಾಕಲು ಸೀತಕ್ಕ ಎಂದೂ ಒಪ್ಪುವಂತಿಲ್ಲ. ಹೆತ್ತ ಕರುಳು ಸಮ್ಮತಿ ಕೊಡುವಂತೆಯೂ ಇಲ್ಲ. ಅವಳ ಈ ಮನಸ್ಸು ರಮೇಶನಿಗೆ ಈ ಮೊದಲು ಅವಳು ಮಾಡಿರುವ ಬೋಧನೆಯಲ್ಲಿಯೇ ಕಂಡು ಬಂದಿರುವುದು. ಅಲ್ಲದೆ ಉಮೇಶನ ಖಾಸಗಿ ಖರ್ಚು ಬೆಳೆದಿರುವುದರಿಂದ, ಬೇರೆಯವರ ವಿಚಾರಕ್ಕೆ ಕಿವಿಗೊಡುವಷ್ಟು ತಾಳ್ಮೆಯು ಅವನಲ್ಲಿರದಿರುವುದರಿಂದ, ಅವನು ಎಂದೂ ರಮೇಶನ ಕೈಕೆಳಗೆ ರಮೇಶನ ವಿಚಾರದಂತೆ ದುಡಿಯಲಾರನೆಂಬುದು ಖಂಡಿತ. ಹಾಗೂ ಒಂದು ವೇಳೆ ಅವನು ಅಂಗಡಿ ಬಿಟ್ಟು ಒತ್ತಟ್ಟಿಗೆ ಸರಿದರೆ, ಸ್ವಂತ ಖರ್ಚಿಗೆ ಹಣ ಸಾಲದೆ ಹೋದರೆ, ಏನು ಮಾಡಲು ಮುಂದಾಗಬಹುದೆಂದು ಹೇಳಬರುವಂತಿಲ್ಲ. ಒಳ್ಳೇದಾದರೆ ಒಳ್ಳೇದು. ಕೆಡುಕಾದರೆ ಸೀತಕ್ಕನ ಅವಸ್ಥೆಯೂ ಸಂಕಣ್ಣನಂತಾಗಬಹುದು. ಇದನ್ನು ನೆನೆದು ರಮೇಶನ ಎದೆ ನಡುಗಿತು. ಅಣ್ಣತಮ್ಮಂದಿರೊಳಗಿನ ಜಗಳ ಮೂರನೆಯವನ ಲಾಭಕ್ಕೆ ಕಾರಣವಾಗಲೂ ಬಹುದು. ಈ ಮೊದಲು ರಮೇಶನೂ ಒಮ್ಮೆ ಊರುಬಿಟ್ಟು ಮುಂಬಯಿಯಲ್ಲಿ ಕೆಲವು ವರುಷಗಳನ್ನು ಕಳೆದಿದ್ದ. ಅದೇ ರೀತಿ ಉಮೇಶನು ಹೊರಟು ಹೋದರೆ!

ರಮೇಶನ ಬಿಸಿಯೇರಿದ ರಕ್ತ ತಕ್ಷಣ ತಣ್ಣಗಾಗಿ ಎದೆ ನಡುಗಿ ಮನಸ್ಸು ಮುರಿಯಿತು. ಈಗ ಅವನ ಎದುರಿಗೆ ಎರಡು ಮಾರ್ಗಗಳಿವೆ. ಒಂದು ತನ್ನ ಹಕ್ಕನ್ನು ಹಿಡಿದು ಮುಂದೆ ಸಾಗುವುದು. ಹೀಗೆ ಮಾಡಿದ್ದಾದರೆ ಮುಂದೆ ಸಂಭವಿಸಬಹುದಾದ ಕುಟುಂಬದ ಒಡಕಿಗೆ ಕಾರಣವಾಗುವುದು. ಇನ್ನೊಂದು ತನ್ನ ಹಕ್ಕನ್ನು ತ್ಯಜಿಸಿ ಒತ್ತಟ್ಟಿಗೆ ಸರಿಯುವುದು. ಈ ಕುರಿತು ಅವನು ಬಹಳವಾಗಿ ಆಲೋಚಿಸಿದ. ಕಡೆಗೆ ಈಗಿನಂತೆಯೇ ಸಾಗುತ್ತಿರಲಿ, ಎಂದು ತನ್ನನ್ನೇ ಸಮಾಧಾನಪಡಿಸಿಕೊಂಡ. ಮತ್ತೆ ಮನೆಯಲ್ಲಿ ಇದ್ದುಬಿದ್ದ ಕೆಲವು ಪುಸ್ತಕಗಳನ್ನು ಎತ್ತಿ ಓದಲು ಆರಂಭಿಸಿದ. ರಮೇಶನ ಮನಸ್ಸು ತ್ಯಾಗವನ್ನು ಒಪ್ಪಿ ಮನೆಯೊಳಗಿನ ಒಡಕನ್ನು ಸದೆಬಡೆಯಿತಾದರೂ ತುಳಸಿಯು ಅದನ್ನು ಒಪ್ಪಿಕೊಳ್ಳಲಿಲ್ಲ. ಹಿರಿಯ ಸೊಸೆಯ ಅಧಿಕಾರವು ಮನೆಯಲ್ಲಿ ಹೆಚ್ಚಿನದಾಗಿರುವುದೆಂಬುದನ್ನು ಅವಳು ಚೆನ್ನಾಗಿ ಬಲ್ಲಳು. ಅವಳು ಕಲಿತ ಹೆಣ್ಣಾದರೂ ಗಂಡನ

ಮನೆಯಲ್ಲಿ ಅಷ್ಟೇ ಜಾಗ್ರತೆಯಿಂದ ಜೀವನ ಮಾಡುತ್ತಿದ್ದಳು. ಆದರೆ ಉಮೇಶನ ಮತ್ತು ಅವಳ ಸ್ವಭಾವಕ್ಕೆ ಸರಿಬೀಳದೆ ಹೋದುದರಿಂದ ಆಗಾಗ್ಗೆ ಮನೆಯೊಳಗೆ ಘರ್ಷಣೆಯಾಗುತ್ತಲಿತ್ತು. ಉಮೇಶನ ದರ್ಪದ ಮಾತನ್ನು ತುಳಸಿಯಿಂದ ಕೇಳಲಿಕ್ಕಾಗುತ್ತಿದ್ದಿಲ್ಲ. ಅಂದು ಊಟಕ್ಕೆ ಕುಳಿತ್ತಿದ್ದ ಉಮೇಶ ಎರಡು ತುತ್ತು ಉಂಡು, ಉಗುಳಿ,

"ಮಾರಿಗಳೆಲ್ಲ ಮನೆಯಲ್ಲಿ ಅನ್ನಕ್ಕೆ ಬಿದ್ದಿರುವುದು. ಸರಿಯಾಗಿ ಬೇಯಿಸಿ ಹಾಕಲು ಗೊತ್ತಿಲ್ಲ" ಎಂದೆನ್ನುತ್ತಾ ಅನ್ನದ ಬಟ್ಟಲನ್ನು ದೂಡಿ ಎದ್ದು ಹೊರಗೆ ಬಂದನು. ಆಗ್ಗೆ ಸೀತಕ್ಕ ಏನೋ ಮನೆಗೆಲಸದಲ್ಲಿ ತೊಡಗಿದ್ದಳು. ತುಳಸಿ ಮಕ್ಕಳ ಅಂಗಿ ಬದಲಾಯಿಸುತ್ತಿದ್ದಳು. ಉಮೇಶನ ಹೆಂಡತಿ ಅಡಿಗೆ ಮನೆಯಲ್ಲಿಯೇ ಇದ್ದಳು. ಗಂಡನು ಅನ್ನ ಬಿಟ್ಟು ಎದ್ದುದರಿಂದ ಅವಳಿಗೆ ತುಂಬಾ ನೋವಾಯಿತು. ತಲೆಯೆತ್ತಿ ನೋಡಿದ ಸೀತಕ್ಕ ಸೊಸೆಯಂದಿರಿಗೆ ನಾಟುವಂತೆ,

"ದಿನಹೋದಂತೆ ನೀವುಗಳು ಮನೆಗೆಲಸ ಮರೆಯುತ್ತಿದ್ದಂತೆ ಕಾಣುತ್ತದೆ. ಇಷ್ಟು ಸಣ್ಣ ಸಂಸಾರವನ್ನು ನಡೆಸಿಕೊಂಡು ಹೋಗಲು ನಿಮಗೆ ಆಗುವುದಿಲ್ಲ. ಇನ್ನು ಮುಂದಕ್ಕೆ ಏನು ಮಾಡಬಲ್ಲಿರಾ ನನಗೇ ತಿಳಿಯುವುದಿಲ್ಲ" ಎಂದಂದು, ಕಿರಿಸೊಸೆಯನ್ನು ಕರೆದು, "ಏನು, ಏನು ಆಯಿತೇ?" ಎಂದು ಕೇಳಿದಳು. ಆದಕ್ಕೆ ಕಿರಿಸೊಸೆಯಿಂದ ಉತ್ತರ ಬಾರದುದನ್ನು ಕಂಡು,

"ನಿನಗೆ ಬಾಯಿ ಇಲ್ಲವೇ? ನಾಲಗೆ ಯಾಕೆ ಅಲ್ಲಾಡಿಸುವುದಿಲ್ಲ? ಅವಳು ಎಲ್ಲಿಗೆ ಹೋದಳು" ಎಂದು ಕೇಳಿದಾಗ, ತುಳಸಿ

"ನನ್ನಿಂದ ಏನಾಗಬೇಕು?" ಎಂದು ಉತ್ತರಕೊಟ್ಟಳು.

"ನೋಡು, ಅವನೇಕೆ ಅನ್ನ ಬಿಟ್ಟು ಎದ್ದಿದ್ದಾನೆ?"

"ಬಿಟ್ಟು ಏಳದೆ ಏನು ಮಾಡುವುದು? ಹೊಟ್ಟೆಯಲ್ಲಿ ಜಾಗಯಿದ್ದರಲ್ಲವೇ ಉಣ್ಣುವುದು? ಅಡ್ಡಾದಿಡ್ಡಿ ತಿಂದು ಬಂದು ಇಲ್ಲಿ ಬೇಕು ಬೇಡವೆಂದು ಕಾಲು ಬಡೆದರೆ ಕೇಳುವವರು ಇದ್ದಾರೆಯೇ?" ತುಳಸಿಯ ಈ ಮಾತಿನಿಂದ ಸೀತಕ್ಕನ ಬಾಯಿ ಬಿಗಿಯಿತಾದರೂ ಉಮೇಶನಿಂದ ಅದನ್ನು ಸಹಿಸಿಕೊಳ್ಳಲಾಗಲಿಲ್ಲ. ಅವನು,

"ಅಡ್ಡಾದಿಡ್ಡಿ ತಿಂದು ಬರುವುದು ನಿನ್ನ ಮಾಂಸವನ್ನು. ಕೇಳು

ನವರಿದ್ದರೆ ಬಾಯಿಗೆ ಬಂದಂತೆ ಬೊಗಳುತ್ತೀ" ಎಂದು ಹಲ್ಲು ಕಿರಿಯುತ್ತಾ ಹೇಳಿದನು.

"ಜಾಗ್ರತೆ, ನಾಲಗೆ ಬಿಗಿಹಿಡಿದು ಮಾತಾಡು. ಮನುಷ್ಯರ ಮಾಂಸ ತಿನ್ನುವುದು ಹುಚ್ಚುಹಿಡಿದ ನಾಯಿ. ನನ್ನನ್ನು ಬೊಗಳು ತ್ತಿರುವೆನೆಂದು ಹೇಳುತ್ತೀಯಾ? ಏನು ಬೊಗಳಿದೆ? ಅಂಗಡಿಯ ಹಣವನ್ನು ನಿನ್ನ ಕಿಸೆಯೊಳಗಿನ ಹಣದಂತೆ ಖರ್ಚುಮಾಡಿ ತಿಂದು ತೇಗುತ್ತಿರುವೆ. ನಾನು ಬೊಗಳುವುದೇ? ಏನು ಬೊಗಳಿದೆ? ಏಕೆ ಬೊಗಳುವುದು? ನಿನ್ನ ಆಸ್ತಿಪಾಸ್ತಿ ಬೇಕೆಂದೇ? ನಿನ್ನ ದುಡ್ಡುಕಾಸು ಬೇಕೆಂದೇ?"

"ಮತ್ತೇತಕ್ಕೆ! ನಾನು ತಿನ್ನುವಾಗ್ಗೆ ನಿನಗೆ ತಂದು ತಿನ್ನಿಸಲಿಲ್ಲವೆಂದು. ಅಂಗಡಿಯ ಹಣವಾದರೇನು? ನಾನು ಗಳಿಸುವುದು, ನಾನು ಖರ್ಚುಮಾಡುವುದು".

"ನೀನು ಖರ್ಚುಮಾಡಲು ಅಂಗಡಿ ನಿನ್ನದೊಬ್ಬನದಲ್ಲ. ನಿನ್ನಷ್ಟೆ ನನಗೂ ಹಕ್ಕಿದೆ. ನನ್ನಷ್ಟೆ ಮನೆಯ ಎಲ್ಲರಿಗೂ ಹಕ್ಕಿದೆ. ನೀನು ಗಳಿಸುವುದು ಎಲ್ಲಿಂದ? ಬಂದರಿನಲ್ಲಿ ಹೊರೆಹೊತ್ತ್ಯೋ? ಗದ್ದೆಯ 'ಹುಣಿ' (ಏರಿ) ಕಡಿದೋ?"

"ಹೌದು, ಹಾಗೆಯೇ ಮಾಡಿ. ನಿನಗೂ ಹಕ್ಕಿರುವುದಾದರೆ ಅಂಗಡಿಗೆ ಬಂದು, ಕುಳಿತು, ವ್ಯಾಪಾರ ಮಾಡಿನೋಡು."

"ಅಂಗಡಿಗೆ ಬರುವುದಿಲ್ಲವೆಂದು ಭಾವಿಸಿದೆಯಾ? ನಿನ್ನಷ್ಟು ವ್ಯಾಪಾರ ಮಾಡಲಾರೆಯೆಂದು ತಿಳಿದೆಯಾ? ಗಂಡಸೆಂದು ನಂಬಿ ಮನೆಯ ಅಧಿಕಾರವನ್ನು ನಿನ್ನಂಥವನ ಕೈಗೆ ಒಪ್ಪಿಸಿದರೆ, ಮನೆಯಲ್ಲಿದ್ದವರು ಉಣ್ಣದೆ ಸಾಯಬೇಕಾದೀತು. ಉಡದೆ ಬೆತ್ತಲೆ ಇರಬೇಕಾದೀತು."

"ನೀನು ನಾಲಗೆಯನ್ನು ಬಿಗಿಹಿಡಿಯದೆ ಹೋದರೆ, ನಿನ್ನನ್ನು ಉಣ್ಣಲು ಕೊಡದೆ ಕೊಲ್ಲುವುದಿಲ್ಲವೆಂದು ತಿಳಿದೆಯಾ?"

"ನೀನೇನು ನನ್ನನ್ನು ಕೊಲ್ಲುವಿ? ನನ್ನನ್ನು ನೀನು ಕೊಲ್ಲಲು ನೋಡಿದರೆ, ನಿನಗೆ ಈ ಮನೆಯ ಅನ್ನನೀರು ಸಲ್ಲದಂತೆ ಮಾಡುವೆನು."

"ಆ ಜಂಭವನ್ನು ಸೆರಗಿನಲ್ಲಿ ಕಟ್ಟಿಡು. ಹೀಗೆ ಜಂಭ ಕೊಚ್ಚಿ ಕೊಳ್ಳುವ ಬಹಳ ಜನರನ್ನು ನೋಡಿದ್ದೇನೆ. ಬಾಯಿಯಿಂದ ಹೇಳುವಷ್ಟು ಕೈಯಿಂದ ಮಾಡುವುದು ಸುಲಭವಾಗಿಲ್ಲ. ನನಗೆ ಅನ್ನನೀರು ಸಲ್ಲದಂತೆ ಮಾಡಲು ನೀನೆಷ್ಟರವಳು? ಮನೆಯಲ್ಲಿ ಅನ್ನನೀರು ಇದ್ದರೆ ನೀನು ಹಾಗೆ ಮಾಡಬಹುದು. ಇಲ್ಲದಿದ್ದರೆ ಏನನ್ನು ಸಲ್ಲದಂತೆ ಮಾಡುವಿ?"

"ಅನ್ನನೀರು ಇಲ್ಲದೆ ಎಲ್ಲಿ ಹೋಗುತ್ತದೆ? ನೀನು ಈ ಮನೆ ಯನ್ನು ನಡೆಸಬಲ್ಲೆಯೆಂದು ಈ ಮನೆಯು ಕಟ್ಟಲ್ಪಟ್ಟಿರುವುದೋ?"

"ಅಲ್ಲ, ನೀನು ನಡೆಸುತ್ತೀ ಎಂದು ಈ ಮನೆಯು ಕಟ್ಟಲ್ಪಟ್ಟಿರ ಬೇಕು; ಅಥವಾ ನಿನ್ನ ಗಂಡ ನಡೆಸಬಹುದೆಂದು..........."

"ಮುಚ್ಚು ಬಾಯಿ. ನನ್ನ ಗಂಡನ ಸುದ್ದಿ ತೆಗೆದರೆ ಜಾಗ್ರತೆ. ಅವರು ಅಷ್ಟು ಸಲಿಗೆ ಕೊಡುತ್ತಾ ಬಂದಿರುವುದರಿಂದಲೇ ನಿನ ಗಿಷ್ಟು ಸೊಕ್ಕೇರಿ ಬಂದಿದೆ."

"ಸೊಕ್ಕೇರಿ ಬಂದುದು ನಿನ್ನ ರಕ್ತ ಕುಡಿದು".

"ರಕ್ತ ಕುಡಿಯಲು ನೀನೇನು ನರಭಕ್ಷಕನೋ?" ಎಂದು ತುಳ ಸಿಯು ಎದೆಯುಬ್ಬಿಸಿ ನಿಂತು ನೆಟ್ಟದೃಷ್ಟಿಯಿಂದ ನೋಡತೊಡಗಿದಳು. ಉಮೇಶನೂ ಅದೇ ರೀತಿ ನಿಂತಿದ್ದು ಅವಳ ಮೇಲೆ ಹಾರಿ ಬೀಳಲಿದ್ದನೋ ಎನ್ನುವಂತಿತ್ತು.

"ಇನ್ನು ಹೆಚ್ಚು ಬೊಗಳಿದರೆ ನಿನ್ನ ರಕ್ತ ಕುಡಿದೇ ತೋರಿಸುವೆನು" ಎಂದನ್ನುತ್ತಾ ಉಮೇಶ ಆಚೆ ಈಚೆ ನೋಡಿ, ಕೈಯಲ್ಲಿ ಹಿಡಿಯಲು ಏನೂ ಸಿಗದುದಕ್ಕೆ ಅಲ್ಲಿಯೇ ನೆಲದಲ್ಲಿದ್ದ ಮಣೆಯೊಂದನ್ನು ಎತ್ತಿಕೊಂಡನು. ಅದಕ್ಕೆ ತುಳಸಿಯೂ ಹಿಂಜರಿಯಲಿಲ್ಲ. ಅವಳೂ ಅಷ್ಟೇ ಕ್ರೋಧದಿಂದ ಅಲ್ಲಿಯೇ ಹತ್ತಿರದಲ್ಲಿದ್ದ ಕತ್ತಿಯನ್ನು ಎತ್ತಿಹಿಡಿದು ಒಂದು ಹೆಜ್ಜೆ ಮುಂದೆ ಸರಿದು ಬಂದು,

"ನನ್ನಂಥವಳ ರಕ್ತವನ್ನು ನಿನ್ನಂಥವನು ಕುಡಿಯಲು ಹೊರಟ ಮೇಲೆ ಮತ್ತೇನುಳಿಯಿತು? ಅಷ್ಟು ಅಹಂಕಾರವಿರುವುದಾದರೆ ಒಂದು ಹೆಜ್ಜೆ ಮುಂದೆ ಬಂದು ನೋಡು". ಎನ್ನುತ್ತಾ ಸೆರಗನ್ನು ಹಿಂದಕ್ಕೆಳೆದು ಸೊಂಟಕ್ಕೆ ಸಿಕ್ಕಿಸಿದಳು. ಉಮೇಶನಿಗೆ ಅವಳ ಮಾತನ್ನು

ಕೇಳಿ ಸಹಿಸಿಕೊಳ್ಳಲಾಗಲಿಲ್ಲ. ರಮ್ಮನೆ ಸರಿದು ಮುಂದಕ್ಕೆ ಬರುವವನಾದ. ಇಬ್ಬರೂ ಎದುರೆದುರಾಗಿ ಹೊಡೆದಾಡಿಕೊಳ್ಳಲಿದ್ದರು. ಆಗ್ಗೆ ಮನೆಯಲ್ಲಿದ್ದವರೆಲ್ಲರೂ ಓಡಿ ಬಂದು ಮಧ್ಯದಲ್ಲಿ ನಿಂತು ಬಾಯಿಬಾಯಿ ಬಡೆದುಕೊಂಡುದುದರಿಂದ ಕೈಯಲ್ಲಿದ್ದ ಕತ್ತಿ ಮತ್ತು ಮಣೆ ಮೇಲಕ್ಕೆತ್ತಲ್ಪಡದೆ ಕೆಂಪೇರಿದ ಕಣ್ಣುಗಳು ಉರಿಕಾರಿದವು.

ಈ ಘಟನೆಯಿಂದಾಗಿ ರಮೇಶನ ಮನಸ್ಸು ತುಂಬಾ ನೊಂದುಕೊಂಡಿತು. ಆದರೆ ತುಳಸಿಯು ಸ್ವಲ್ಪವೂ ನಿರಾಶೆಗೊಳ್ಳಲಿಲ್ಲ. ರಮೇಶನು ಎಷ್ಟು ಮೆತ್ತಗಾದನೋ ಅಷ್ಟೇ ತುಳಸಿಯು ಕಠಿಣವಾದಳು. ಯಾವ ರೀತಿಯಿಂದಾದರೂ ಮನೆಯೊಳಗಿನ ಮಲಿನ ವಾತಾವರಣವು ತಿಳಿಯಾಗಿ ಅಣ್ಣತಮ್ಮಂದಿರೊಳಗಿನ ಜಗಳ ತಪ್ಪಿ, ಹೊರಗಿನ ಜನರು ಮನಸ್ಸಿಗೆ ತೋರಿದಂತೆ ಆಡಿಕೊಳ್ಳದಂತಾಗಲಿ, ಆಪ್ತೇಷ್ಟರು ಮತ್ತು ಬಂಧುಬಾಂಧವರು ಮನಸ್ಸು ಮುರಿದುಕೊಳ್ಳದಿರಲಿ ಎಂದು ರಮೇಶನು ಹವಣಿಸುತ್ತಿದ್ದಾಗ; ತಾನು ಕೂಡಾ ಎಲ್ಲರಂತೆ ಬದುಕು ಮಾಡಿಕೊಂಡಿರಬೇಕಾದುದರಿಂದ ಕೌಟುಂಬಿಕ ಜೀವನವನ್ನು ಸದೆಬಡೆಯುತ್ತಿರುವ ಈ ಉಮೇಶನ ಸೊಕ್ಕನ್ನು ಯಾವ ರೀತಿಯಿಂದಲೇ ಆಗಲಿ ಮುರಿಯತಕ್ಕದ್ದೇ ಎಂದು ತುಳಸಿಯು ಹಂಚಿಕೆ ಹೂಡತೊಡಗಿದಳು. ಕೌಟುಂಬಿಕ ಜೀವನದಲ್ಲಿ ತುಳಸಿಯ ಹಟಸಾಧನೆ ರಮೇಶನಿಗೆ ಸರಿಬೀಳಲಿಲ್ಲ. ಹಿರಿಯನಾದ ರಮೇಶನ ಮನೆಯ ಆಡಳಿತೆ ನೋಡುವ ಉದಾಸೀನತೆಯಿಂದಾಗಿ ಎಲ್ಲರಂತೆ ಮರ್ಯಾದೆಯಿಂದಿರಲು ಆಗುವುದಿಲ್ಲವೆಂದು ತುಳಸಿಯು ಕೋಪಗೊಂಡಳು. ಈ ಮಧ್ಯೆ ಉಮೇಶನು ಎರಡು ಮೂರು ಬಾರಿ ತುಳಸಿಯನ್ನು ಬೇಕೆಂತಲೇ ರೊಚ್ಚಿಗೇಳಿಸಿದನು. ಇದರಿಂದಾಗಿ ತುಳಸಿಯ ಮನಸ್ಸು ಕ್ರಮತಪ್ಪಿ ಬೆಚ್ಚಗಾಗುವಂತಾಯಿತು. ಮನೆಗಾಗಿ ಅಕ್ಕಿ ಮತ್ತು ಜೀನಸು ಕಳುಹಿಸಿಕೊಡಲು ಅಂಗಡಿಗೆ ಹೇಳಿ ಕಳುಹಿಸಿದರೆ, ಉಮೇಶನು ಅದನ್ನು ಕಿವಿಗೆ ಹಾಕಿಕೊಳ್ಳುತ್ತಿದ್ದಿಲ್ಲ. ಮತ್ತೆ ಎರಡೆರಡು ಸಲ ಹೇಳಿ ಕಳುಹಿಸಿದ ನಂತರ ಮನೆಗೆ ಅಕ್ಕಿ ಜೀನಸು ಬರುತ್ತಿತ್ತು. ಆದರೆ ಎಷ್ಟು ಬೇಕಿರುವುದೋ ಅಷ್ಟಿಲ್ಲ. ಹೀಗಾಗುವುದನ್ನು ಒಂದೆರಡು ಬಾರಿ ನೋಡಿ ತುಳಸಿಯಿಂದ ಸಹಿಸಿಕೊಳ್ಳಲಾಗಲಿಲ್ಲ. ಮೂರನೇ ಬಾರಿ ಅವಳೇ ಎದ್ದು ಅಂಗಡಿಗೆ ನಡೆದಳು. ಅತ್ತಿಗೆ ಅಂಗಡಿಗೆ ಬಂದುದನ್ನು ನೋಡಿಯೂ ಉಮೇಶ ಏನು ಬೇಕೆಂದು ವಿಚಾರಿಸಲಿಲ್ಲ. ತುಳಸಿಯು ಒಮ್ಮೆ ಕಣ್ಣುತೆರೆದು ಅಂಗಡಿಯ ಆಳುಗಳನ್ನು ದಿಟ್ಟಿಸಿ ನೋಡುವವ

ಳಾದಳು. ಮನೆಯೊಳಗೆ ವೈಮನಸ್ಸು ಬೆಳೆದು ಬಂದಿರುವುದು ಅಂಗಡಿಯ ಆಳುಗಳಿಗೂ ಗೊತ್ತಾಗಿ ಹೋಗಿದೆ. ಆದರೆ ಹಿರಿಯ ಸೊಸೆಯು ತಾನಾಗಿ ಅಂಗಡಿಗೆ ಬರುವ ಪ್ರಸಂಗ ಬರಬಹುದೆಂಬುದನ್ನು ಯಾರೂ ಊಹಿಸಿರಲಿಲ್ಲ. ಈಗ ಯಜಮಾನಿಯ ಮುನಿಸಿಗೆ ಗುರಿಯಾಗಿ ಆಳುಗಳೆಲ್ಲ ಸ್ವಲ್ಪ ಹೆದರಿಕೊಂಡರು.

"ಮನೆಗೆ ಬೇಕಾಗುವ ಏನಾದರೂ ಸಾಮಾನುಗಳು ಬೇಕಿದ್ದರೆ ಅವನ್ನು ಕಳುಹಿಸಿಕೊಡಲು ಮೂರು ಮೂರು ಬಾರಿ ಹೇಳಿ ಕಳುಹಿಸಬೇಕೇನು? ಮನಸ್ಸಿಟ್ಟು ಕೆಲಸ ಮಾಡುವುದಾದರೆ ಮಾಡಿರಿ. ಮನಸ್ಸಿಲ್ಲದೆ ಹೋದರೆ ನಿಮ್ಮಂಥಾ ಬೇರೆ ಆಳು ಗಳೂ ನಮಗೆ ಸಿಗಬಹುದು" ಎಂದು ಗರ್ವದಿಂದಲೇ ಹೇಳಿ ಮುಗಿಸಿ ತುಳಸಿ ಅಂಗಡಿಯ ಆಳುಗಳನ್ನು ಮತ್ತೊಮ್ಮೆ ಕಣ್ಣರಳಿಸಿ ನೋಡಿ ದಳು. ಅವಳ ಮಾತಿಗೆ ಯಾರೂ ಪ್ರತ್ಯುತ್ತರವೀಯಲಿಲ್ಲ. ಉಮೇಶನು ಒಮ್ಮೆ ತಲೆಯೆತ್ತಿ ಅವಳ ಕಡೆಗೆ ನೋಡಿಯೂ ಅವಳನ್ನು ನೋಡದವನಂತೆ ಅವಳ ಮಾತನ್ನು ಕೇಳದವನಂತೆ ನಟಿಸಿದನು. ಅವಳ ಮಾತಿಗೆ ಉತ್ತರ ಕೊಡ ಬೇಕೆಂದು ಅವನು ಮುಂದಾದರೂ ಈ ಮೊದಲಿನ ಘಟನೆಯು ಸ್ಮೃತಿಯಲ್ಲಿ ಹರಿದಾಗ ಅವನ ಮನಸ್ಸು ಒಡಂಬಡಲಿಲ್ಲ. ಅಂಗಡಿಯ ಆಳುಗಳು ಮನೆ ಯಜಮಾನನಿಗೆ ಯಾವ ರೀತಿಯಲ್ಲಿ ಮರ್ಯಾದೆ ಸಲ್ಲಿಸುತ್ತಿರುವರೆಂಬುದನ್ನು ಅವನು ಚೆನ್ನಾಗಿ ತಿಳಿದು ಬಲ್ಲನು. ಒಂದು ವೇಳೆ ಮನೆಯಲ್ಲಿ ನಡೆದಿರು ವಂತೆ ಅಂಗಡಿಯಲ್ಲಿಯೂ ಅತ್ತಿಗೆ ಮೈದುನರೊಳಗೆ ಜಗಳ ನಡೆದರೆ ಯಾರಾ ದರೂ ಅವನ ಸಹಾಯಕ್ಕೆ ಬರಬಹುದೆಂದು ಹೇಳಬರುವಂತಿಲ್ಲ. ಮನೆ ಯಲ್ಲಾಗಿದ್ದರೆ ಹೆಂಡತಿ ಮತ್ತು ತಾಯಿ ಅವನ ಪರವಾಗಿ ವಾದಿಸಲು ಸಿದ್ಧ ರಾಗಿರುತ್ತಿದ್ದರು. ಇಲ್ಲಿ ಅಂಗಡಿಯ ಆಳುಗಳೇ ಅವನ ಕಡೆಯಲ್ಲಿ ನಿಲ್ಲಲು ಮೈತಪ್ಪಿಸಿಕೊಂಡರೆ, ಇನ್ನಿತರ ವಿಷಯವನ್ನು ಯೋಚಿಸಿಯೂ ಫಲವಿಲ್ಲ. ಇದನ್ನೆಲ್ಲವನ್ನು ನೆನೆದು ಅವನ ಹೆಗ್ಗಳಿಕೆಯು ತನ್ನಷ್ಟಕ್ಕೆ ಇಳಿಯತೊಡಗಿತು. ತುಳಸಿಯ ಆಜ್ಞೆ ಹೊರಡುತ್ತಲೇ ಆಳುಗಳು ಒಮ್ಮೆ ಸ್ತಂಭಿತರಾಗಿದ್ದರೂ ಉಮೇಶನ ಕಡೆಗೆ ನೋಡಿ, ಅವನು ಬಾಯಿ ಬಿಡದಿರುವುದನ್ನು ಕಂಡು ತಮ್ಮ ಕೆಲಸದಲ್ಲಿ ಮುಗಿದುಬಿದ್ದರು. ಅಷ್ಟರಲ್ಲಿ ತುಳಸಿಯು ಅಂಗಡಿಯ ಮೆಟ್ಟಲು ಏರಿ ಮೇಲೆ ಬಂದು, ಸುತ್ತಲೂ ತಿರುಗಿ ನೋಡಿ, ತಪಾಸಣೆ

ನಡೆಸುವವಳಂತೆ ದೃಷ್ಟಿಸರಿಸಿ, ಮೆಟ್ಟಲಿಳಿದು ಹೊರಟುಹೋದಳು. ತುಳಸಿಯು ಹೊರಟುಹೋದ ಮೇಲೆ ಉಮೇಶನು ಆಳುಗಳನ್ನು ಕರೆದು,

"ಆ ಶನಿ ಇನ್ನೊನ್ಮೆ ಅಂಗಡಿಗೆ ಬರುವುದು ಬೇಡ. ಏನು ಬೇಕೋ ಅದನ್ನು ಕೂಡಲೇ ಕಳುಹಿಸಿಕೊಡಿರಿ" ಎಂದು

ಹೇಳುವವನಾದನು. ಉಮೇಶನ ಈ ಮಾತಿನಿಂದ ಆಳುಗಳೆಲ್ಲ ಒಮ್ಮೆಲೆ ಚಕಿತರಾಗಿ ಹೋದರು. ಎಲ್ಲರ ಎದುರಿಗೆ ದರ್ಪದಿಂದ ಎದೆಯುಬ್ಬಿಸಿ ನಡೆಯುವ ಉಮೇಶನು ತುಳಸಿಯ ಬರೋಣದಿಂದ ಇಷ್ಟು ಕುಗ್ಗಿಹೋಗಬಹುದೆಂಬುದನ್ನು ಯಾರೂ ಎಣಿಸಿರಲಿಲ್ಲ.

ತುಳಸಿಯು ಅಂಗಡಿಗೆ ಹೋಗಿ ಹಿಂತಿರುಗಿ ಮನೆಗೆ ಬಂದರೂ ಅವಳ ಮನಸ್ಸು ಸಮಾಧಾನಗೊಳ್ಳಲಿಲ್ಲ. ಒಂದು ವೇಳೆ ಎಂದಿನಂತೆ ಇಂದು ಕೂಡಾ ಉಮೇಶನು ತುಳಸಿಯ ಮಾತಿಗೆ ಉತ್ತರವೀಯಲು ಹೋಗುತ್ತಿದ್ದರೆ, ಪರಿಣಾಮ ಏನಾಗಿ ಹೋಗಬಹುದಿತ್ತೆಂಬುದು ಯಾರಿಗೂ ಗೊತ್ತಿರಲಿಲ್ಲ. ತುಳಸಿಯು ತನ್ನ ಹೆಣ್ಣು ಬುದ್ಧಿಗೊಪ್ಪುವಂತೆ ವರ್ತಿಸುತ್ತಿದ್ದಳೆನ್ನಬಹುದು. ಹೆಣ್ಣಿನ ಮನಸ್ಸು ಮುರಿದು, ಎದೆ ನೊಂದ ಮೇಲೆ ಅದನ್ನು ಆ ಮೊದಲಿನ ಶಾಂತಸ್ಥಿತಿಗೆ ತರುವುದು ಕಷ್ಟ. ಕ್ರಮೇಣ ಪರಿಸ್ಥಿತಿಯು ಬದಲಾಗುತ್ತಾ ಬಂದು ತಿಳುವಳಿಕೆಯು ಹೆಚ್ಚಬೇಕು. ಈಗ ಮನೆಯ ಯಾವ ಕೆಲಸವನ್ನು ಮಾಡಲು ಅವಳ ಮನಸ್ಸು ಸಮ್ಮತಿಸುತ್ತಿದ್ದಿಲ್ಲ. ಮಾಡದಿರಲೂ ಆಗುತ್ತಿದ್ದಿಲ್ಲ. ಎದುರಿಗಿರುವ ವಸ್ತುಗಳ ರೂಪವೆಲ್ಲ ಅವಳಿಗೆ ವಿಕಾರವಾಗಿ ಕಾಣುತ್ತಿರುವಂತೆ ಭಾಸವಾಗತೊಡಗಿತು. ಈಗ ಅವಳು ಏನನ್ನೊ ನೆನೆದು ನಡುಗಿದಳು. ಉಮೇಶನು ಅಂಗಡಿಯಿಂದ ಮನೆಗೆ ಸಾಮಾನು ಕಳುಹಿಸಿಕೊಡದೆ ಹೋದರೆ! ತುಳಸಿ ತಲೆಯೆತ್ತಿ ದಿಟ್ಟಿಸಿ ನೋಡಿದಳು. ಮುಖ ಗಂಭೀರವಾಗಿ ಕಣ್ಣುಗಳಲ್ಲಿ ಕಿಡಿಗಳು ಉದುರತೊಡಗಿದವು. ಆಗ್ಗೆ ಅಂಗಡಿಯ ಆಳು ಬುಟ್ಟಿಯಲ್ಲಿ ಅಕ್ಕಿ ಜೀನಸುಗಳನ್ನು ತುಂಬಿ ಹೊತ್ತುಕೊಂಡು ಅಂಗಳದ ಒಳಹೊಕ್ಕನು.

ಸಂಜೆಗೆ ರಮೇಶನು ಮನೆಗೆ ಬಂದವನು ತುಳಸಿಯ ಮುಖದ ಮೇಲೆ ಕರಿಮೋಡ ಕವಿದಿರುವುದನ್ನು ಕಂಡು ತಣ್ಣಗಾಗಿ ಹೋದನು. ಮನೆಯಲ್ಲಿ ಏನಾದರೂ ನಡೆದಿರಬೇಕೆಂದು ಅವನು ಊಹಿಸುವ ಜತೆಗೆ ಅವನ ಕಿರಿಯ ತಂಗಿ ಲಕ್ಷ್ಮಿಯು ಅವನು ಕೇಳದೆಯೆ ತನಗೆ ಗೊತ್ತಿರುವುದನ್ನು ಹಿರಿಯಣ್ಣನಲ್ಲಿ ಹೇಳಿದಳು. ಹೊರಗಿನಿಂದ ಬರುವಾಗ್ಗೆ ಎದೆಯೊಳಗೆ ತುಂಬಿದ

ಉತ್ಸಾಹ ಹಾಗೂ ತಲೆಯೊಳಗೆ ಸುತ್ತುತ್ತಿದ್ದ ಆಲೋಚನೆಗಳೆಲ್ಲ ತನ್ನಷ್ಟಕ್ಕೆ ಇಳಿದುಹೋಗಿ ರಮೇಶನು ಉದಾಸಗೊಂಡನು. ಮನೆಗಾಗಿ ದುಡಿದು ಗಳಿಸುತ್ತಿರುವೆನೆಂದು ಉಮೇಶನು ದರ್ಪದಿಂದಿರುವುದು ಸಹಜ. ಹಿರಿಯ ಸೊಸೆಯಾಗಿಯೂ ತಾನು ಇನ್ನೊಬ್ಬರ ಬಾಯಿಯಿಂದ ಕೇಳುತ್ತಿರಬೇಕೇ ಎಂದು ತುಳಸಿಯು ಗರ್ವದಿಂದಿರುವುದೂ ನಿಜ. ಉಮೇಶನು ತನ್ನ ಹೆಗ್ಗಳಿಕೆಯನ್ನು ಬಿಟ್ಟುಬಿಡಲಾರನು. ಮನೆಯವರೊಡನೆ ಅವರಂತೆ ಎಲ್ಲರಿಗಾಗಿ ಬದುಕು ಮಾಡಲಾರನು. ಅದು ಅವನ ಮಾನಸಿಕ ದೊಡ್ಡಸ್ತಿಕೆಗೆ ಒಪ್ಪುವಂಥದ್ದೂ ಅಲ್ಲ. ಆದರಿಂದಾಗಿ ತುಳಸಿಯ ಅಭಿಮಾನವು ತುಳಿಯಲ್ಪಟ್ಟ ಹಾವಿನಂತೆ ಕೆರಳಿರುವುದು. ಈ ಮಧ್ಯೆ ರಮೇಶನ ಬದುಕು ಸಮಸ್ಯೆಗೀಡಾಗಿರುವುದು. ಹೆಂಡತಿಯ ಪಕ್ಷವನ್ನು ಕಟ್ಟದಿರಲು ಅವನಿಗೆ ಸಾಧ್ಯವಿಲ್ಲ. ಮನೆಯಲ್ಲಿ ಒಡಕು ಉದ್ಭವಿಸದಂತೆ ಮಾಡುವುದೂ ಅವನ ಕರ್ತವ್ಯವಾಗಿರುವುದು. ಪ್ರಸ್ತುತ ಅವನಿಗೆ ಏನು ಮಾಡುವುದೆಂದು ತಿಳಿಯಲಿಲ್ಲ. ಏನು ಮಾಡಬೇಕೆಂಬ ವಿಚಾರವೂ ಹುಟ್ಟಲಿಲ್ಲ. ಮನಸ್ಸೂ ಸಮಾಧಾನಕ್ಕೆ ಬರಲಿಲ್ಲ. ಯಾವುದೊಂದು ಹೊಸ ಮಾರ್ಗ ತೋರಿ ಎದುರಿಗಿರುವ ಸಮಸ್ಯೆ ಬಗೆಹರಿಯುತ್ತಿದ್ದರೆ ಒಳ್ಳೇದು. ಇದರಿಂದಾಗಿ ಅವನ ಮನಸ್ಸು ನೊಂದಿತು. ಎದೆ ಕರಗಿ ಬಂದಿತು. ಆಗ್ಗೆ ರಮೇಶನ ಹಿರಿಯ ಮಗನು ಮನೆಯ ಚಾವಡಿಯ ಬದಿಯಲ್ಲಿ ಕಾಲುಬಿಟ್ಟು ಕುಳಿತುಕೊಂಡು ಕೂಗುತ್ತಲಿದ್ದನು. ತುಳಸಿಯು ಮಗುವಿನ ಕೂಗಿಗೆ ಕಿವಿಗೊಟ್ಟರುವಂತೆ ತೋರುತ್ತಿದ್ದಿಲ್ಲ. ಏನೋ ಒಳಗಿಂದೊಳಗೆ ಗುಣುಗುಟ್ಟುತ್ತಿದ್ದಳು. ಕಿರಿಯ ಸೊಸೆಯು ಅಡಿಗೆಮನೆಯಲ್ಲಿ ಕೆಲಸ ಮಾಡುತ್ತಲಿದ್ದಳು. ರಮೇಶನು ಕೂಗುತ್ತಿರುವ ಮಗುವಿನ ಬಳಿಗೆ ಬಂದು ಕಣ್ಣುಬಿಟ್ಟು ನೋಡಿದನು. ಕತ್ತಲೆಯಾಗುತ್ತಲೇ ಮನೆಯ ಮಕ್ಕಳಿಗೆಲ್ಲ ಬಿಸಿನೀರು ಮೀಯಿಸಿ, ಉಣ್ಣಿಸುವುದು ವಾಡಿಕೆ. ತುಳಸಿಯು ಇಂದು ಮಗುವನ್ನು ಮೀಯಿಸಿರಲಿಲ್ಲ. ಮೈಮೇಲಿದ್ದ ಬಟ್ಟೆಯು ದಿನವಿಡೀ ಆಡುತ್ತಿದ್ದಾಗ್ಗೆ ಕೊಳಕಾಗಿತ್ತು. ಕಣ್ಣುಗಳಲ್ಲಿ ನಿದ್ದೆ ತುಂಬುತ್ತಲಿತ್ತು. ರಮೇಶನು ಕತ್ತೆತ್ತಿ ಹೆಂಡತಿಯ ಕಡೆಗೆ ನೋಡಿದ. ಆಗಲೂ ತುಳಸಿಯು ಮಗುವಿನ ಕೂಗಿಗೆ ಕಿವಿಗೊಟ್ಟರುವಂತೆ ಕಾಣಲಿಲ್ಲ. ರಮೇಶನು ಒಂದು ಹೆಜ್ಜೆ ಮುಂದೆ ಬಂದು, ಹೆಂಡತಿಯನ್ನು ಸಂಬೋಧಿಸಿ,

"ನಿನ್ನ ಕೋಪವನ್ನು ಮಕ್ಕಳ ಮೇಲೆ ಏಕೆ ತೆಗೆಯುತ್ತೀ? ಅವನ್ನು

ಮೀಯಿಸಿ ಉಣಿಸಿ ಮಲಗಿಸಬಾರದೇ?" ಎಂದು ನಿಧಾನವಾಗಿ ಹೇಳಿದನು. ಆಗ್ಗೆ ತುಳಸಿಯು ಕತ್ತೆತ್ತಿ ನೋಡಿ, ಸೆರಗಿನಿಂದ ಮುಖವನ್ನು ಒರಸಿಕೊಳ್ಳುತ್ತಾ, ತುಟಿಕಚ್ಚಿ ಉಗುಳು ನುಂಗಿ ಕೊಂಡಳು. ಮತ್ತೆ,

"ಉಣಿಸುವುದು ಎಲ್ಲಿಂದ? ನೀವು ದುಡಿದು ತಂದು ಹಾಕಿದ್ದುಂಟೋ?" ಎಂದು ಉತ್ತರ ಕೊಟ್ಟಳು.

"ಇಷ್ಟು ದಿನಗಳಲ್ಲಿ ಯಾರು ದುಡಿದು ತಂದುದನ್ನು ನೀನು ಮಕ್ಕಳಿಗೆ ಉಣಿಸುತ್ತಿದ್ದದ್ದು. ಹಾಗೆ ಇಂದೂ ಉಣಿಸಿ ಮಲಗಿಸಬಾರದೇ?"

"ಯಾರು ದುಡಿದರೂ ಅವೆಲ್ಲ ತಮ್ಮ ಮನೆಯದೇ ಎಂಬ ನಂಬಿಗೆಯಿಂದಿದ್ದೆ. ಈಗ ನನ್ನ ನಂಬಿಗೆಯು ತಪ್ಪಾಗಿರುವಂತೆ ಕಾಣುತ್ತದೆ. ನನ್ನ ಆಶೆಯು ತುಳಿಯಲ್ಪಟ್ಟಂತೆ ಕಾಣುತ್ತದೆ. ನಿಮಗೆ ಅದರ ಗೊಡವೆ ಎಲ್ಲಿದೆ? ನೀವು ಆ ವಿಚಾರವನ್ನು ಎಲ್ಲಿ ಮಾಡುತ್ತಿರುವಿರಿ.? ನನ್ನ ಎಣಿಕೆ ತಪ್ಪಾಗಿ ನಾನು ಈ ಮನೆಗೆ ಭಾರವಾಗುತ್ತಲಿದ್ದೇನೆ. ಎಲ್ಲರೂ ಎಲ್ಲರಂತೆ ಸುಖವಾಗಿರಬೇಕೆಂಬ ಅತುಲ ಆಕಾಂಕ್ಷೆಯು ನಿಮ್ಮ ತಂದೆಯವರೊಡನೆ ಈ ಮನೆಯಿಂದ ದೂರ ತೊಲಗಿದೆ. ಎಂದಿನಂತೆ ಇಂದು ಕೂಡಾ ದಿನದೂಡು ಎಂದು ಬೋಧಿಸುತ್ತಿರುವಿರಿ. ಅದು ಹೇಗೆ ಸಾಧ್ಯ? ಎಲ್ಲರ ಕ್ಷೇಮವನ್ನು ನೀವು ಕೂಡಾ ಬಯಸುತ್ತಿರಬಹುದು. ಬೇರೆಯವರು ನಿಮ್ಮ ಕ್ಷೇಮ ಚಿಂತನೆಯನ್ನು ಮಾಡುತ್ತಿರುವರೋ ನಿಮಗೆ ಗೊತ್ತಿಲ್ಲ........."

"ಎಲ್ಲರೂ ಎಲ್ಲರಂತಿರಲು ಎಂದಿಗೂ ಸಾಧ್ಯವಿಲ್ಲ. ತುಳಸೀ ಅದನ್ನು ನನ್ನಂತೆ ನೀನೂ ಒಪ್ಪಿಕೊಳ್ಳಬೇಕಾದೀತು".

"ಅದನ್ನು ಒಪ್ಪಿಕೊಳ್ಳುತ್ತೇನೆ. ತಾನೇ ಶಕ್ತನು ಇನ್ನಿತರರು ಅಶಕ್ತರು ಎಂದು ತಿಳಿದು ಕೊಳ್ಳುವವರೊಡನೆ ಕೂಡಿಕೊಂಡಿರಲು ಸಾಧ್ಯವಿದೆಯೇನು?"

"ಸಾಧ್ಯವಾಗದೆ ಹೋಗಬಹುದು. ಸಾಧಿಸುವಂತೆ ಮಾಡಿದರೆ ಸಾಧ್ಯವಾಗಲೂ ಬಹುದು. ಹಾಗಾಗುವ ಮೊದಲು ನಾವು ನಮ್ಮ ಮನಸ್ಸನ್ನೇ ಶುದ್ಧಿ ಮಾಡಿಕೊಳ್ಳಬೇಕಾಗುತ್ತದೆ".

"ನೀವು ನಿಮ್ಮ ಮನಸ್ಸನ್ನು ಶುದ್ಧಿ ಮಾಡಿಕೊಂಡಿರಬಹುದು. ಕಾರಣ, ನಿಮಗೆ ಯಾರ ಒಳಿತೂ ಇಲ್ಲ. ಯಾರ ಕೆಡುಕೂ ಬೇಡ. ಆದರೆ......"

"ಆದರೇನು?"

"ನೀವು ನನ್ನಂತೆ ಮನೆಯಲ್ಲಿಯೇ ಇದ್ದು ಮನೆಯೊಳಗೆ ನಡೆಯುತ್ತಿರುವ ಸಂಗತಿಗಳನ್ನು ತಿಳಿದಿದ್ದರೆ ಹೀಗೆ ಹೇಳುತ್ತಿದ್ದಿರೋ ಏನೋ. ಊಟದ ಹೊತ್ತಿಗೆ ಮನೆಗೆ ಬರುತ್ತೀರಿ. ಮನಸ್ಸು ಹರಿದಲ್ಲಿಗೆ ಹೊರಟು ಹೋಗುತ್ತೀರಿ. ಆದ್ದರಿಂದಲೇ ನೀವು ಹಾಗೆ ಹೇಳುತ್ತಿರುವುದು. ತನ್ನನ್ನು ಅನುಸರಿಸಿ ಬಂದವರೂ ಮನೆಯಲ್ಲಿ ಇದ್ದಾರೆಂದು ತಿಳಿದು ನೀವು ಅವರಿಗಾಗಿ ಏನಾದರೂ ಮಾಡುತ್ತಿದ್ದರೆ ಅಥವಾ ಅವರನ್ನು ಇನ್ನೊಬ್ಬರ ಅನ್ನಕ್ಕೆ ಬೀಳಗೊಡದಿರುತ್ತಿದ್ದರೆ, ನಿಮ್ಮ ಮಾತನ್ನು ನಾನು ಒಪ್ಪಿಕೊಳ್ಳುತ್ತಿದ್ದೆ. ಆ ವಿಚಾರ ನಿಮ್ಮಲ್ಲಿಲ್ಲ. ಆದ್ದರಿಂದ ನೀವು ಮನೆಯ ಎಲ್ಲರಿಗೂ ಬೇಕಾದವರಾಗಿದ್ದೀರಿ. ಅವರೇನಾದರೂ ನಿಮಗೆ ಬೈಯುತ್ತಿದ್ದರೂ ನಿಮಗೆ ಕೇಳುತ್ತಿರುವುದಿಲ್ಲ. ಅದನ್ನು ಕೇಳುವುದಕ್ಕೆ ನೀವು ಮನೆಯಲ್ಲಿಯೂ ಇಲ್ಲ. ಕೇಳಬೇಕೆಂಬ ಹವ್ಯಾಸವೂ ನಿಮ್ಮಲ್ಲಿಲ್ಲ. ಅದಕ್ಕಾಗಿ ನೀವು ಎಲ್ಲರನ್ನು ನಿಮ್ಮಂತೆ ಸಜ್ಜನರೆಂದು ತಿಳಿಯುತ್ತೀರಾ?"

"ಎಲ್ಲರಂತೆ ನಾನು ಇದ್ದೇನೆ ಮತ್ತು ನನ್ನಂತೆ ಎಲ್ಲರೂ ಇರಬೇಕೆಂದು ನಾನು ಇಚ್ಛಿಸಿದ್ದರೆ, ಎಲ್ಲರೂ ಒಂದೇ ರೀತಿಯ ಕಸಬು ಕೈಗಾರಿಕೆಯನ್ನುಮಾಡಿ ಬದುಕಬೇಕೆಂದು ಒಪ್ಪಿಕೊಂಡಂತೆ. ಕಸಬು ಕೈಗಾರಿಕೆಯಲ್ಲಾಗಲೀ ಊಟ ಉಡುಗೊರೆಯಲ್ಲಾಗಲೀ ಜನರು ಭಿನ್ನಭಿನ್ನ ರುಚಿಯುಳ್ಳವರಾಗಿರುತ್ತಾರೆ. ಅಂಥಾ ವಿಚಾರವನ್ನು ಜನತೆಯ ನಿರ್ಧಾರಕ್ಕೆ ಬಿಟ್ಟುಗೊಡುವುದು ಉತ್ತಮ. ಕೌಟುಂಬಿಕ ಜೀವನದಲ್ಲಿ ಮತ್ತು ಹತ್ತು ಜನರು ಸೇರಿಕೊಂಡಿರುವಲ್ಲಿ ವೈಯಕ್ತಿಕ ಸುಖವನ್ನು ದೂರ ಬಿಟ್ಟುಬಿಡಬೇಕಾಗುತ್ತದೆ. ತುಳಸೀ, ಒಬ್ಬನ ವಿಚಾರವು ಬೇಕಾದರೆ ಎಷ್ಟೇ ಉತ್ತಮವುಳ್ಳದ್ದಾಗಿದ್ದರೂ ಹತ್ತು ಜನರು ಸೇರಿರುವಲ್ಲಿ ಹೆಚ್ಚಿನವರು ಅದಕ್ಕೆ

ಸಮ್ಮತಿಸುವುದಿಲ್ಲವಾದರೆ, ಪರಿಸ್ಥಿತಿ ಸುಧಾರಿಸಿ ವಾತಾವರಣ ಅನುಕೂಲವಾಗುವ ವರೆಗೆ ಸಮಯ ಕಾಯಬೇಕಾಗುತ್ತದೆ".

"ನಿಮ್ಮ ಅಭಿಪ್ರಾಯವೇನು? ಕೌಟುಂಬಿಕ ಜೀವನವು ನನಗೆ ಬೇಡವಾಗಿರುವುದೆಂದೋ?"

"ಹಾಗಲ್ಲ. ಮನೆಯ ಸದ್ಯದ ವಾತಾವರಣವು ನಿನ್ನ ವಿಚಾರಕ್ಕೆ ಸರಿಬೀಳದೆ ಹೋಗುತ್ತಿರಬಹುದು. ಅದಕ್ಕಾಗಿ ನೀನು ನೊಂದು ಕೊಳ್ಳಬಾರದೆಂದು ಹೇಳುತ್ತಿದ್ದೇನೆ".

"ಮನೆಯ ವಾತಾವರಣವು ನನಗೆ ಸರಿಬೀಳದೆ ಹೋಗುತ್ತಿದ್ದರೆ, ನನ್ನನ್ನು ನಾನೇ ಪರಿಸ್ಥಿತಿಗೆ ಹೊಂದಿಸಿಕೊಳ್ಳುತ್ತಿದ್ದೆ. ಪರಿಸ್ಥಿತಿ ಹಾಗಿಲ್ಲ. ನಿಮ್ಮಿಂದಾಗಿ, ನಿಮ್ಮ ಉದಾಸೀನತೆಯಿಂದಾಗಿ ನಾನು ಮತ್ತು ನಮ್ಮ ಮಕ್ಕಳು ದಾರಿಪಾಲಾಗುವ ಸಂದರ್ಭ ಬರ ಬಹುದು. ನೀವು ಏಕಾಂಗಿಯಾಗಿರುತ್ತಿದ್ದರೆ, ನಿಮ್ಮ ಮಾತನ್ನು ಸಾರ್ವಜನಿಕರ ದೃಷ್ಟಿಕೋನದಿಂದ ಒಪ್ಪಿಕೊಳ್ಳುತ್ತಿದ್ದೆ. ಹೆಣ್ಣಾ ದವಳು ಹೆಚ್ಚಿನ ವಿಷಯಗಳಿಗೆ ಹೆಚ್ಚಿನ ಸಂದರ್ಭಗಳಲ್ಲಿ ಗಂಡನನ್ನು ಅನುಸರಿಸಿ ನಡೆಯುವುದೇ ಧರ್ಮವೆಂದಾಗುವುದು. ನಿಮ್ಮ ವ್ಯವಹಾರದಿಂದಾಗಿ ನಾನು ಮತ್ತು ನಮ್ಮ ಮಕ್ಕಳು ಇನ್ನೊಬ್ಬರ ಅನ್ನಕ್ಕೆ ಬಿದ್ದಂತಿದ್ದೇವೆ. ಅದನ್ನು ನೀವು ತಿಳಿಯುವುದಿಲ್ಲ. ತಿಳಿಯುವ ವಿಚಾರದಲ್ಲಿಯೂ ಇಲ್ಲ".

"ಅದನ್ನೇ ನಾನು ಹೇಳುತ್ತಿದ್ದೇನೆ. ಇನ್ನೊಬ್ಬರು ಎಂದು ಏಕೆ ಹೇಳುತ್ತಿರಬೇಕು. ಎಲ್ಲರೂ ನಮ್ಮವರೇ ಎಂದು ಏಕೆ ತಿಳಿದು ಕೊಳ್ಳಬಾರದು?"

"ನೀವು ಮತ್ತು ನಾನು ಹಾಗೆ ತಿಳಿದುಕೊಳ್ಳುತ್ತಿರಬಹುದು. ನಮ್ಮಂತೆ ಎಲ್ಲರೂ ತಿಳಿದುಕೊಳ್ಳುತ್ತಿರುವರೋ? ಅದಕ್ಕಾ ಗಿಯೇ ನಾನು ಹೇಳುತ್ತಿರುವುದು ನೀವು ಮನೆಯಲ್ಲಿ ಇರುತ್ತಿ ರುವುದಾದರೆ ನಿಮಗೆ ಎಲ್ಲವೂ ತಿಳಿಯುಬಹುದೆಂದು".

ತುಳಸಿಯ ಈ ಮಾತಿಗೆ ರಮೇಶನು ಉತ್ತರ ಕೊಡಲಿಲ್ಲ. ಉತ್ತರ ಕೊಡಲೂ ಮುಂದಾಗಲಿಲ್ಲ. ತುಳಸಿಯು ಸ್ವಲ್ಪ ಕಡಮೆ ಮಾತಾಡುತ್ತಿದ್ದರೆ, ಅವನು ಮಾತನ್ನು ಮೆಲ್ಲನೆ ಮುಂದಕ್ಕೆ ಒಯ್ಯಬಹುದಿತ್ತು. ಈಗ ಅವನು

ಎಷ್ಟು ಮಾತಾಡುತ್ತಾನೋ ಅಷ್ಟೇ ತುಳಸಿಯೂ ಮಾತಾಡುತ್ತಿದ್ದಳು. ಅವನು ಮುಂದೆ ಏನು ಹೇಳಬೇಕೆಂದು ಕಾಯದೆ ಒತ್ತಟ್ಟಿಗೆ ಸರಿದು ಹೋದನು. ಆದರೆ ಅವನ ಎದೆಯೊಳಗಿನ ಗುದಿಗುದಿ ಕಡಮೆಯಾಗಲಿಲ್ಲ. ಮನಸ್ಸಿನ ಬೇನೆಯೂ ಹೋಗಲಿಲ್ಲ. ಸಮರ್ಪಕವಾದ ಉತ್ತರ ಕೊಟ್ಟು ತುಳಸಿಯ ಬಾಯಿಬಿಗಿಯುತ್ತಿದ್ದರೆ ಅವನು ಅಷ್ಟು ನೊಂದುಕೊಳ್ಳುತ್ತಿದ್ದಿಲ್ಲ. ಅಥವಾ ತುಳಸಿಯು ತಾನು ಹೇಳಿದುದೇ ಸರಿಯೆಂದು ಹಟಹಿಡಿಯುತ್ತಿದ್ದರೂ ಅವನಿಗೆ ಅದು ದೊಡ್ಡದೆನಿಸುತ್ತಿರಲಿಲ್ಲ. ಗಂಡನಿಗೆ ದುಡಿದು ಗಳಿಸಿರಿ ಎಂದು ಹೆಂಡತಿಯು ಹೇಳುವುದೇನು ದೊಡ್ಡ ವಿಷಯವೂ ಅಲ್ಲ. ತನ್ನ ಸುಖಕ್ಕಾಗಿ, ವಿಲಾಸಕ್ಕಾಗಿ ಅವಳು ಹೇಳುತ್ತಿರುವುದಲ್ಲ ಎಂಬುದನ್ನು ಅವನೂ ಅರಿತಿದ್ದಾನೆ. ಆದರೆ ಇನ್ನೊಬ್ಬರು ದುಡಿದು ಗಳಿಸುವ ಅನ್ನಕ್ಕೆ ತನ್ನನ್ನು ಮತ್ತು ಮಕ್ಕಳನ್ನು ಬೀಳಗೊಡಬೇಡಿರೆಂದು ಬೇಡಿಕೊಳ್ಳುತ್ತಿದ್ದಾಳೆ. ಧರ್ಮವಂತ ಸ್ತ್ರೀಯರಿಗೆ ಅದು ಒಪ್ಪುವ ಮಾತು. ಮರ್ಯಾದೆಯ ವಿಷಯ. ತುಳಸಿ ಅದನ್ನೇ ಒತ್ತಿಒತ್ತಿ ಹೇಳುತ್ತಿದ್ದಳು. ಈಗ, ರಮೇಶನು ತನ್ನ ಜೀವನವನ್ನು ಮಾರ್ಪಾಟುಗೊಳಿಸಿ ಸ್ಥಿರಪ್ರಜ್ಞೆಯಿಂದ ಮುಂದೆ ಸಾಗಬೇಕು; ಇಲ್ಲವೆ, ಹೆಂಡತಿ ಮಕ್ಕಳನ್ನು ಮನೆಯ ಅನ್ನಕ್ಕೆ ಭಾರವಾಗಿರಿಸಿ ಈಗ ಇರುವಂತೆ 'ಸಂಸಾರ ಸನ್ಯಾಸಿ'ಯಾಗಿರಬೇಕು. ಈ ಎರಡು ಮಾರ್ಗಗಳ ಮಧ್ಯೆ ಅವನ ವಿಚಾರವು ಹೊಯ್ದಾಡತೊಡಗಿತು. ಆದರೆ ಅವನು ಈಗ ಮಾಡಲು ಹೊರಟಿರುವ ಉದ್ದೇಶಸಾಧನೆಗೆ ಈ ಮನೆತನದ ತೊಂದರೆಯು ಆಪತ್ತಾಗಿ ಕಂಡುಕೊಳ್ಳುವಂತಾಯಿತು!

ರಮೇಶನು ಬಹಳ ದಿನಗಳಿಂದ ಮನೆಯ ಆಡಳಿತೆ ವಿಚಾರವನ್ನೆ ಮರೆತುಬಿಟ್ಟದ್ದ. ಅನಂತರ ಮನೆಯ ಕುರಿತು ಆಲೋಚಿಸಬೇಕೆಂಬ ಇಚ್ಛೆಯೂ ಅವನ ಮನಸ್ಸಿನಲ್ಲಿ ಮೂಡಿರಲಿಲ್ಲ. ಎರಡನೇ ಮಹಾಯುದ್ಧವು ಆರಂಭವಾಗಿ ಪ್ರಾಂತೀಯ ಕಾಂಗ್ರೆಸ್ಸು ಮಂತ್ರಿಮಂಡಳಗಳು ರಾಜಿನಾಮೆ ಕೊಟ್ಟಬಳಿಕ, ಮಹಾತ್ಮಾ ಗಾಂಧಿಜೀಯವರು ಕಾಂಗ್ರೆಸ್ಸಿನ ಮುಂದಾಳುತನ ವಹಿಸಿ 'ಅಖಿಲ ಭಾರತ ಕಾಂಗ್ರೆಸ್ಸು ಸಮಿತಿ'ಯ ನಿರ್ಧಾರದಂತೆ ವೈಯಕ್ತಿಕ ಸತ್ಯಾಗ್ರಹ ಆರಂಭಮಾಡಿದಾಗ್ಗೆ, ಆ ಸತ್ಯಾಗ್ರಹ ಚಳವಳಿಯಲ್ಲಿ ಸೇರಿಕೊಂಡು ಬಳಲಿದವರ ಪರಿವಾರಕ್ಕೆ ಮತ್ತು ಕಾಂಗ್ರೆಸ್ಸು ಕಾರ್ಯಕರ್ತರಿಗೆ ರಮೇಶನು ಅಪ್ರತ್ಯಕ್ಷವಾಗಿ ಸಹಾಯನೀಡಿ ಪ್ರೋತ್ಸಾಹಿಸುತ್ತಿರುವನೆಂಬ ಸುದ್ದಿಯು

ಆಳುವ ಇಂಗ್ಲೀಷು ಸರಕಾರದ ತಿಳುವಳಿಕೆಗೆ ಬಂದಿತ್ತು. ಇದಕ್ಕಾಗಿ ಸರ ಕಾರದ ಗುಪ್ತ ಪೋಲೀಸು ದಳವು ರಮೇಶನ ವ್ಯವಹಾರವನ್ನು ಕಣ್ಣಿಟ್ಟು ಪರಾಂಬರಿಸುತ್ತಿತ್ತು. ಇದು ಕೂಡಾ ಬಹಳ ದಿನಗಳ ಮಾತು. ಅಂದು ಕಾರಾಗೃಹಕ್ಕೆ ಹೋದವರಲ್ಲಿ ಹಲವರು ಈಗಾಗಲೆ ಹಿಂತಿರುಗಿ ಬಂದಿರುವರು. ಮಹಾತ್ಮಾಗಾಂಧಿಯವರು ಇಂಗ್ಲೀಷು ಸರಕಾರಕ್ಕೆ 'ಭಾರತದಿಂದ ತೊಲಗಿರಿ' ಎಂದು ಹೇಳಿಯಾಗಿದೆ. ಇಂದುನಾಳೆಯೋ ಕೆಲವೇ ದಿನಗಳಲ್ಲಿ ಅಖಿಲ ಭಾರತ ಕಾಂಗ್ರೆಸ್ಸು ಸಮಿತಿಯು ಮುಂಬಯಿಯಲ್ಲಿ ಒಟ್ಟಾಗಲಿರುವದು. ತಾನೂ ಒಬ್ಬ ಕಾಂಗ್ರೆಸು ಸೇವಕನೆಂಬುದಾಗಿ ಜನಸಾಮಾನ್ಯರಲ್ಲಿ ತೋರಿಕೆಗೆ ಬಂದನಂತರ ರಮೇಶನು ಹೆಚ್ಚೆಚ್ಚಾಗಿ ಅದೇ ಕಾರ್ಯವನ್ನು ಮಾಡತೊಡಗಿ ದನು. ಅದಕ್ಕೆ ಮನೆಯ ಕಲುಷಿತ ವಾತಾವರಣವು ಮತ್ತೂ ಅನುಕೂಲ ವಾಯಿತು. ಅಂಗಡಿಗೆ ಹೋಗಿ ಕೆಲಸಮಾಡುವಂತಿಲ್ಲ. ಮನೆಯಲ್ಲಿ ಕುಳಿತು ಓದಿ ಓದಿ ಸಾಕಾಗಿತ್ತು. ಈ ತನ್ಮಧ್ಯೆ ಗೆಳೆಯರನ್ನು ಹುಡುಕಿಕೊಂಡು ಪೇಟೆಗೆ ಹೋದವನು, ರಾಷ್ಟ್ರೀಯ ಚಳವಳದ ವಿಧಾಯಕ ಕಾರ್ಯದ ಕಡೆಗೆ ಎಳೆಯಲ್ಪಟ್ಟನು. ಆದರೆ ಇಂದು, ತುಳಸಿಯು ಅವನಿಗೆ ಮನೆತನದ ಪರಿಸ್ಥಿತಿಯನ್ನು ತೋರಿಸಿಕೊಟ್ಟು, ದುಡಿದು ಗಳಿಸಲು ಬೋಧಿಸುತ್ತಿರುವಳು. ಹೆಂಡತಿಯ ಮಾತಿಗೆ ಕಿವಿಗೊಟ್ಟು ಮನೆಯ ಆಡಳಿತೆ ನೋಡಲು ಹೊರ ಟರೆ, ಹೊರಗಿನ ಸಂಬಂಧವನ್ನು ಕಡಿದುಕೊಳ್ಳಬೇಕಾಗುತ್ತದೆ. ಅದಕ್ಕೆ ಅವನ ಮನಸ್ಸು ಒಡಂಬಡುತ್ತಿರಲಿಲ್ಲ. ಇನ್ನೊಂದು ಕಡೆ ತನ್ನ ಹೆಂಡತಿ ಮಕ್ಕಳು ಮನೆಯ ಅನ್ನಕ್ಕೆ ಭಾರವಾಗಿ ಕಂಡು ದೂಷಿಸಲ್ಪಡುವುದು ಸರಿ ಯಾಗಿ ತೋರುತ್ತಿದ್ದಿಲ್ಲ. ಈಗ ಅವನಿಗೆ ಈ ಆಪತ್ತಿನಿಂದ ಹೇಗೆ ಪಾರಾ ಗುವುದೆಂದು ತಿಳಿಯಲಿಲ್ಲ. ರಾತ್ರಿ ಬಿಟ್ಟ ಕಣ್ಣಿನಲ್ಲಿಯೇ ಕಳೆದುಹೋಯಿತು. ಏನು ಮಾಡಿದರೂ ನಿದ್ದೆಹತ್ತಲಿಲ್ಲ. ಬೆಳಗ್ಗೆ ಹಾಸಿಗೆ ಬಿಟ್ಟು ಬಂದವನು ಮನೆ ಸುಟ್ಟುಕೊಂಡವನಂತೆ ನಿರುತ್ಸಾಹಗೊಂಡಿದ್ದನು. ಹೊತ್ತು ಮೇಲೇರಿ ಬಂದರೂ ಮುಖವನ್ನೂ ತೊಳೆದಿರಲಿಲ್ಲ. ಚಹಕ್ಕೆ ಕರೆದರೂ ಕುಳಿತಲ್ಲಿಂದ ಏಳಲಿಲ್ಲ. ಮನೆಯ ಶಾಲಾ ಮಕ್ಕಳು ಪುಸ್ತಕ ಹಿಡಿದುಕೊಂಡು ಶಾಲೆಗೆ ಹೋಗಲು ಸಿದ್ಧತೆ ಮಾಡುವಾಗ್ಗೆ ರಮೇಶನು ಮೈಯಲ್ಲಿದ್ದ ಮಲಿನ ಬಟ್ಟೆ ಯನ್ನು ಬದಲಿಸದೆಯೇ ಅಂಗಡಿಗೆ ಹೋದನು. ಅಂಗಡಿಗೆ ಬಂದು ಏನು ಮಾಡಬೇಕೆಂಬ ನಿರ್ಧಾರವಿಲ್ಲದೆ ಸ್ವಲ್ಪ ಹೊತ್ತು ಕುಳಿತುಕೊಂಡನು.

ಉಮೇಶನು ಮಾತಾಡುತ್ತಿದ್ದರೆ, ತಾನೂ ಮಾತಾಡಬೇಕೆಂದು ಅವನ ಮನಸ್ಸು ಒಡನುಡಿಯುತ್ತಲಿತ್ತು. ಆದರೆ ಉಮೇಶನು ಅಭಿಮಾನವನ್ನು ಬಿಡಲಿಲ್ಲ. ತನ್ನಣ್ಣನು ಅಂಗಡಿಗೆ ಬಂದಿದ್ದರೂ ತಲೆಯೆತ್ತಲಿಲ್ಲ. ಕಣ್ಣು ಬಿಟ್ಟು ನೋಡಲೂ ಇಲ್ಲ. ರಮೇಶನು ಈಗ ಪೇಚಿನಲ್ಲಿ ಬೀಳುವಂತಾದನು. ತಾನಾಗಿಯೇ ಮಾತಾಡಬೇಕೆಂದು ಮುಂದಾದರೂ ನಾಲಗೆ ಅಲ್ಲಾಡಲಿಲ್ಲ. ಬಾಯಿಯಿಂದ ಮಾತು ಹೊರಬೀಳಲಿಲ್ಲ. ಕಡೆಗೆ ಆಚೆ ಈಚೆ ನೋಡುತ್ತಾ ಹೇಗೆ ಅವನು ಸುದ್ದಿಲ್ಲದೆ ಅಂಗಡಿಗೆ ಬಂದಿದ್ದನೋ ಹಾಗೆಯೇ ಸದ್ದಿಲ್ಲದೆ ಅಂಗಡಿಯಿಂದ ಇಳಿದು ಹೊರಟುಹೋದನು. ಹಾಗೆ ಹೊರಟವನು ಬಂದುದು ಹಂಪನಕಟ್ಟೆಗೆ. ಅಲ್ಲಿ ನಿಂತು ಆಲೋಚಿಸಿಯೇ ಎಲ್ಲಿಗೆ, ಯಾವ ಗೆಳೆಯನ ಬಳಿಗೆ ಹೋಗಬೇಕೆಂದು ನಿಶ್ಚಯಿಸದಾದ. ಮನೆಗೆ ಹಿಂತಿರುಗಿ ಹೋಗಲು ಮನಸ್ಸು ಒಡಂಬಡಲಿಲ್ಲ. ಮೆಲ್ಲನೆ ಬಾವಟೆ ಗುಡ್ಡೆ ಹತ್ತಿ ಅಲ್ಲಿ ಬೆಂಚಿನಲ್ಲಿ ಒರಗಿಕೊಂಡನು. ಎದುರಿನಲ್ಲಿದ್ದ ಪ್ರದೇಶವು ಹಚ್ಚಹಸುರಾಗಿದ್ದು ಮೋಹಕವಾಗಿದ್ದರೂ ಮನಸ್ಸು ಉದಾಸವಾಗಿದ್ದುದರಿಂದ ಮೋಡ ಕವಿದು ಹೋಗಿತ್ತು. ದೂರದಲ್ಲಿದ್ದ ಸಮುದ್ರವು ಶಾಂತವಾಗಿದ್ದರೂ ಬಿಸಿಲ್ಗುದುರೆಯಂತೆ ಕಣ್ಣೆದುರಿನಲ್ಲಿ ನಲಿಯುತ್ತಿತ್ತು. ರಮೇಶನು ಏನನ್ನು ಆಲೋಚಿಸುತ್ತಿದ್ದನೋ ಅವನಿಗೇ ಗೊತ್ತಿದ್ದಿಲ್ಲ. ಏನನ್ನು ಎಣಿಕೆಹಾಕುತ್ತಿದ್ದನೋ ಅದುವೇ ತಿಳಿಯುತ್ತಿದ್ದಿಲ್ಲ. ಊಟತಿಂಡಿಯ ನೆನಪೂ ದೂರವಾಗಿತ್ತು. ಕತ್ತಲಾದ ಮೇಲೆ ಗುಡ್ಡದ ಮೇಲೆ ಯಾರೂ ಅಡ್ಡಾಡದಾಗ ರಮೇಶನು ಎದ್ದು ಮನೆಯ ಕಡೆಗೆ ಹೊರಟನು. ಇದೇ ಸ್ಥಿತಿಯಲ್ಲಿ ಕೆಲವು ದಿನಗಳು ಕಳೆದುವು. ಮುಂಬಯಿಯಲ್ಲಿ ಒಟ್ಟಾಗಿದ್ದ 'ಅಖಿಲ ಭಾರತ ಕಾಂಗ್ರೆಸ್ಸು ಸಮಿತಿ'ಯು "ಭಾರತದಿಂದ ತೊಲಗಿರಿ" ಎಂಬ ಠರಾವನ್ನು ಸ್ವೀಕರಿಸಿದ ಸುದ್ದಿಯು ಬಂತು. ಅದರ ಜೊತೆಗೆ ದೇಶದ ಮುಖಂಡರೆಲ್ಲ ಬಂಧಿಸಲ್ಪಟ್ಟರು. ಮಂಗಳೂರಿನಲ್ಲಿ ರಮೇಶನೂ ಸೆರೆಹಿಡಿಯಲ್ಪಟ್ಟನು.

ಸೀತಕ್ಕ ಹಲವು ದಿನಗಳವರೆಗೆ ರಮೇಶನಿಗಾಗಿ ಹಂಬಲಿಸಿ ಮರುಗಿದಳು. ಮೊದಲ ದಿನದಲ್ಲಿ ಮನೆಯ ಮಕ್ಕಳೆಲ್ಲ ತಾಯಿಯ ಧ್ವನಿಗೆ ಧ್ವನಿಗೂಡಿಸಿದ್ದವು. ಕ್ರಮೇಣ ಮಕ್ಕಳು ತಮ್ಮ ಆಟಪಾಠದಲ್ಲಿ ಸೇರಿಹೋದುವು. ತುಳಸಿಯ ಕುರಿತಾಗಿ ಯಾರೂ ಏನನ್ನೂ ತಿಳಿಯಲಿಲ್ಲ. ಅವಳು ಕೂಗಿದುದನ್ನು ಯಾರೂ ಕೇಳಲಿಲ್ಲ. ಅವಳು ಕಣ್ಣೀರುಗರೆಯುವುದನ್ನು ಯಾರೂ

ಕಂಡಿಲ್ಲ. ಆದರೂ ಅವಳು ಗಂಡನ ದಸ್ತಗಿರಿಯಿಂದ ನೊಂದಿರಲಿಲ್ಲವೆಂದು ಹೇಳುವಷ್ಟು ಧೈರ್ಯ ಯಾರಿಗೂ ಇರಲಿಲ್ಲ. ಮಳೆಗಾಲದಲ್ಲಿ ತುಂಬಿದ್ದ ಕೆರೆಯು ಮಳೆಗಾಲ ದಾಟ, ಬಿಸಿಲು ಪ್ರಖರವಾಗುತ್ತಲೆ ಮೆಲ್ಲನೆ ಬತ್ತುತ್ತಾ ಬರುವಂತೆ ಅವಳ ಸ್ಥಿತಿಯಾಗಿತ್ತು. ದಿನಹೋದಂತೆ ಅವಳ ಪ್ರಕೃತಿಯು ಕೆಡುತ್ತಾ ಬಂದು ಬಾಡಿದ ಹೂವಿನಂತಾಗಿತ್ತು. ರಮೇಶನು ದಸ್ತಗಿರಿಯಾಗಿದ್ದ ಮೂರನೆ ದಿನವೇ ತುಳಸಿಯ ಅಣ್ಣ ನಾರಾಯಣರಾಯರು ಮಂಗಳೂರಿಗೆ ಬಂದಿದ್ದರು. ತುಳಸಿಯನ್ನು ಕಂಡು, ಸೀತಕ್ಕನಿಗೆ ಸಮಾಧಾನ ಹೇಳಿ ರಮೇಶನನ್ನು ಬಂಧಮುಕ್ತ ಮಾಡಲು ಪ್ರಯತ್ನಿಸುವೆನೆಂದು ಹೇಳಿದ್ದರು. ಹಾಗೆಯೇ ಅವರು ಅನ್ನನೀರಿನ ಪರಿವೆಯಿಲ್ಲದೆ, ಕೈತುಂಬ ಕಾಸು ಖರ್ಚು ಮಾಡಿ, ಸರಕಾರದ ದೊಡ್ಡದೊಡ್ಡ ಅಧಿಕಾರಿಗಳನ್ನು ಕಂಡು, ಮಾತಾಡಿದರು. ಆದರೆ 'ಡಿಫೆನ್ಸ ಆಫ್ ಇಂಡಿಯಾ' ಕಾನೂನಿನ ಪ್ರಕಾರ ಕೇಂದ್ರ ಸರಕಾರವೇ ಈ ಉಲ್ಲೇಖನವನ್ನು ಜಾಹೀರು ಪಡಿಸಿರುವುದರಿಂದ ನಾರಾಯಣರಾಯರ ಪ್ರಯತ್ನ ಫಲದಾಯಕವಾಗಲಿಲ್ಲ. ಹಾಗೂ ಅವರು ಹತ್ತು ಹನ್ನೆರಡು ದಿನಗಳವರೆಗೆ ತನ್ನಿಂದ ಸಾಧ್ಯವಿರುವ ಪ್ರಯತ್ನಮಾಡಿ ಬರೀ ಕೈಯಿಂದ ಹಿಂತಿರುಗಿ ಬಂದರು. ಆ ಕುಟುಂಬದಲ್ಲಿ ಸ್ವಲ್ಪವೂ ಬೇಸರಪಡದೆ ಸಂತೋಷ ದಿಂದಿದ್ದ ಮನುಷ್ಯನೆಂದರೆ ಉಮೇಶನೊಬ್ಬನೆ. ಮಧ್ಯಾಹ್ನ ಕಾಲದಲ್ಲಿ, ರಾತ್ರಿಗೆ ಮನೆಯಲ್ಲಿರುವಾಗ್ಗೆ ಸಾಧ್ಯವಾದ ರೀತಿಯಲ್ಲಿ ಗೆಲುವಿನ ಮಾತುಗಳನ್ನು ಆಡಿ ತುಳಸಿಯನ್ನು ಚುಚ್ಚಬೇಕೆಂದು ಅವನು ಎಣಿಕೆ ಹಾಕಿದ್ದನು. ಆದರೆ ಅವನು ಅವಳನ್ನು ಎಷ್ಟು ಹಂಗಿಸಬೇಕೆಂದಿದ್ದನೋ ಅದಕ್ಕಿಂತ ಹೆಚ್ಚು ಅವಳು ನೊಂದು ತಿವಿಯಲ್ಪಟ್ಟಿದ್ದಳು. ಎರಡನೆ ಬಾರಿ ತುಳಿಸಿಯ ಬಳಿಗೆ ಬಂದ ನಾರಾಯಣ ರಾಯರು ಸೀತಕ್ಕನಿಗೆ ಧೈರ್ಯಹೇಳಲು ಮುಂದಾಗದೆ "ಋಣವಿದ್ದಂತೆ ಆಗುತ್ತದೆ" ಎಂದು ಸಮಾಧಾನ ಹೇಳಲು ಹೊರಟರು. ಆಗಲೂ ತುಳಸಿಯು ಬಾಯಿಬಿಟ್ಟು ಮಾತಾಡಲಿಲ್ಲ. ತನ್ನಣ್ಣನು ಏನೆಲ್ಲಾ ಸಾಧನೆ ಮಾಡಿದನೆಂದು ವಿಚಾರಿಸಲೂ ಇಲ್ಲ. ಅವಳು ಮಾತಾಡದಿದ್ದರೂ ನಾರಾಯಣರಾಯರು ಅವಳ ಎದೆಯೊಳಗಿನ ನೋವನ್ನು ಮುಖದ ಮೇಲಿಂದ ಓದಿ ತಿಳಿದುಕೊಂಡರು. ಕಡೆಗೆ ತಾನಾಗಿಯೆ ಮುಂದೆ ಬಂದು, ಸೀತಕ್ಕನಲ್ಲಿ ಕೇಳಿಕೊಂಡು, ತುಳಸಿ ಯನ್ನು ತನ್ನೊಟ್ಟಿಗೆ ಕರೆದೊಯ್ಯುವ ಅಭಿಪ್ರಾಯವನ್ನು ಹೊರಡಿಸಿದರು. ಅದಕ್ಕೆ ಸೀತಕ್ಕ ಸಮಾಧಾನದಿಂದ ಒಪ್ಪಿಗೆ ಕೊಡದಿದ್ದರೂ ತವರುಮನೆಗೆ

ಹೋಗಿ ಬರುವುದು ಒಳ್ಳೆದೆಂಬುದನ್ನು ಸಮರ್ಥಿಸಿದಳು. ಅದೇ ದಿನ ಮಧ್ಯಾಹ್ನ ದಾಟುತ್ತಲೇ ನಾರಾಯಣರಾಯರು ಒಂದು ಕುದುರೆ ಗಾಡಿಯನ್ನು ಕರೆದು ತಂದು ಸಂಕಣ್ಣನವರ ಮನೆ ಎದುರಿಗೆ ನಿಲ್ಲಿಸಿದರು. ತುಳಸಿಯು ಮಕ್ಕಳನ್ನು ಹಿಡಿದುಕೊಂಡು ಅತ್ತೆಯ ಕಡೆಗೆ ಹೊರಳಿ 'ಬರುತ್ತೇನೆ' ಎಂದಂದು ಹೊರಟಳು. ಆಗ್ಗೆ ಉಮೇಶನು ಚಾವಡಿಯ ಜಗಲಿಯಲ್ಲಿ ಚಾಪೆ ಬಿಡಿಸಿ ಒರಗಿಕೊಂಡಿದ್ದನು. ತುಳಸಿಯು ತವರುಮನೆಗೆ ಹೋಗುವಾಗ್ಗೆ ಅವನು ಎದ್ದು ಕುಳಿತು ಕೊಳ್ಳಲೂ ಇಲ್ಲ. ತುಳಸಿಯು ಅವನ ಕಡೆಗೆ ತಿರುಗಿ ನೋಡಲೂ ಇಲ್ಲ. ನಾರಾಯಣ ರಾಯರು ಪೆಟ್ಟಿಗೆ ಎತ್ತಿಕೊಂಡು ಬರುತ್ತಾ ಮನೆಯಲ್ಲಿದ್ದ ಎಲ್ಲರನ್ನೂ ಕರೆದು, ಮಾತಾಡಿ, ಹೊರಟರು.

ಹೀಗೆಯೇ ಎರಡು ವರುಷಗಳು ಕಳೆದುವು. ಈ ತನ್ಮಧ್ಯೆ ಸೀತಕ್ಕ ಕಾಯಿಲೆ ಬಿದ್ದಿದ್ದಾಗ ತುಳಸಿಯು ಗಂಡನ ಮನೆಗೆ ಬಂದಿದ್ದವಳು ಹತ್ತು ದಿವಸ ಇದ್ದು ಅತ್ತೆಯು ಗುಣಹೊಂದುತ್ತಲೇ ಹೊರಟು ಹೋಗಿದ್ದಳು. ಆಗ್ಗೆ ಮನೆಯವರಲ್ಲಿ ಯಾರೂ ಹೆಚ್ಚಾಗಿ ಮಾತಾಡುತ್ತಿದ್ದಿಲ್ಲ. ಕಾರಣ, ಅವಳು ಯಾರ ಜತೆಯೂ ಮಾತಾಡಲು ಮುಂದಾಗುತ್ತಿದ್ದಿಲ್ಲ. ಮುಖ ಎತ್ತಿ ನಡೆ ಯುತ್ತಿದ್ದಿಲ್ಲ. ಆದ್ದರಿಂದ ಮನೆಯವರು ತಾವಾಗಿಯೆ ಅವಳ ಕೂಡೆ ಮಾತಾ ಡುವುದನ್ನು ಕಡಮೆ ಮಾಡಬೇಕಾಯಿತು. ಸೀತಕ್ಕ ಹಲವು ಬಾರಿ ರಮೇಶನನ್ನು ನೆನೆದು ಹಲುಬಿ ಕಣ್ಣೀರುಗರೆದುದುಂಟು. ಅದಕ್ಕೂ ತುಳಸಿಯು ಉತ್ತರ ಕೊಡುತ್ತಿದ್ದಿಲ್ಲ. ಉಮೇಶನ ಸವಾರಿ ಮಾತ್ರ ಹೆಚ್ಚೆಚ್ಚಾಗಿ ಮನೆಯ ಒಳ ಹೊರಗೆ ಆಗುತ್ತಲಿತ್ತು. ಆದರೆ ತಪ್ಪಿಯೂ ಕೂಡಾ ತುಳಸಿಯು ಅವನನ್ನು ಕಣ್ಣೆತ್ತಿ ನೋಡಿರಲಿಲ್ಲ. ಈ ಹೊತ್ತಿಗೆ ಸೆರೆಹಿಡಿಯಲ್ಪಟ್ಟ ನೂರಾರು ದೇಶ ಸೇವಕ ರಲ್ಲಿ ಒಬ್ಬೊಬ್ಬರನ್ನೇ ಸರಕಾರವು ಬಂಧಮುಕ್ತಮಾಡುತ್ತಾ ಬಂತು. ಇವರಲ್ಲಿ ಕೆಲವರು ತಪ್ಪುಗಾರರಲ್ಲದೆಯೂ ಇನ್ನು ಕೆಲವರು ಕ್ಷಮೆ ಬೇಡಿಯೂ ಕಾರಾಗೃ ಹದಿಂದ ಹೊರಗೆ ಬಂದಿರುವರೆಂದು ಸುದ್ದಿ. ಇದು ಎಲ್ಲಿಯವರೆಗೆ ಸತ್ಯವೆಂಬುದು ತಿಳಿದಿಲ್ಲ. ಅದೇ ಸಂದರ್ಭದಲ್ಲಿ ರಮೇಶನೂ ಬಂಧಮುಕ್ತಮಾಡಲ್ಪಟ್ಟನು.

ಮನೆಗೆ ಹಿಂತಿರುಗಿ ಬಂದನಂತರ ನಾಲ್ಕು ದಿನಗಳವರೆಗೆ ರಮೇಶನು ಎಲ್ಲಿಯು ಹೋಗಿದ್ದಿಲ್ಲ. ಸೀತಕ್ಕನ ಹೋದ ಜೀವ ಬಂದಂತಾಗಿತ್ತು. ಮನೆಯ ಮಕ್ಕಳ ಮೇಲೆ ಅಷ್ಟೊಂದು ರೀತಿಯ ಪರಿಣಾಮವಾಗಿರಲಿಲ್ಲ. ಉಮೇಶನು ಮಾತ್ರ ಸ್ವಲ್ಪ ಬಿಗಿಯಲ್ಪಟ್ಟದ್ದನು. ರಮೇಶನು ಅಂಗಡಿಯ ಲೇವಾದೇವಿಯ

ಕುರಿತು ವಿಚಾರಿಸಬಹುದೆಂದು ಅವನ ಮನಸ್ಸು ಒಡನುಡಿಯುತ್ತಿದ್ದುದು ಈಗ ಸಮಾಧಾನ ಹೊಂದುವಂತಾಯಿತು. ರಮೇಶನು ಮರೆತು ಕೂಡಾ ಅಂಗಡಿಯ ಪ್ರಸ್ತಾಪವನ್ನು ಎತ್ತಲಿಲ್ಲ. ಐದನೇ ದಿನದಲ್ಲಿ ಮೂಲ್ಕಿಗೆ ಹೋಗಿ ತನ್ನ ಹೆಂಡತಿ ಮಕ್ಕಳನ್ನು ಕಂಡನು. ಆಗ್ಗೆ ಅವನು ಕಾರಾಗೃಹದಲ್ಲಿರುವುದಕ್ಕಿಂತಲೂ ಹೆಚ್ಚಾಗಿ ನೊಂದುಕೊಂಡನು. ಮಕ್ಕಳಿಬ್ಬರೂ ಕ್ಷೇಮವಾಗಿಯೇ ಇದ್ದರು ಎಂದನ್ನ ಬಹುದು. ತುಳಸಿಯು ಮಾತ್ರ ಸಂಪೂರ್ಣ ಒಣಗಿ ಹೋಗಿದ್ದಳು. ತಾರುಣ್ಯದ ಸೌಂದರ್ಯ ಕಾಣದಾಗಿತ್ತು. ಮುಖವು ರೋಗಿಯಂತಿತ್ತು. ಕಣ್ಣುಗಳ ಕಾಂತಿ ಕಡಮೆಯಾಗಿತ್ತು. ಏನನ್ನು ಮಾತಾಡಬೇಕೋ ಅದನ್ನು ರಮೇಶನು ಮಾತಾಡದಾದನು. ಏನನ್ನು ವಿಚಾರಿಸಲಿದ್ದನೋ ಅವನ್ನು ವಿಚಾರಿಸದಾದನು. ಮನೆಯಲ್ಲಿರುವವರಿಗಿಂತ ಮನೆಗೆ ಬಂದವನೇ ಹೆಚ್ಚಾಗಿ ಬೆಪ್ಪನಾಗಿ ಹೋದನು. ಎರಡು ಮೂರು ದಿನಗಳು ಕಳೆದಾದ ಮೇಲೆ ನಾರಾಯಣರಾಯರು ಒಂದು ದಿನ ಒಟ್ಟಿಗೆ ಕುಳಿತು ಊಟಮಾಡುತ್ತಿದ್ದಾಗ್ಗೆ ರಮೇಶನನ್ನು ಉದ್ದೇಶಿಸಿ,

"ಇನ್ನು ಮುಂದೆ ಏನು ಮಾಡುವ ಆಲೋಚನೆಯಲ್ಲಿರುವೆ? ನಿನ್ನ ತಮ್ಮನ ಜತೆಗೂಡಿ ತಂದೆಯ ವ್ಯಾಪಾರವನ್ನೇ ಬೆಳೆಸುತ್ತಿಯಾ, ಅಥವಾ ಪ್ರತ್ಯೇಕವಾಗಿ ನಿಂತು ಬೇರೆ ಏನಾದರೂ ಉದ್ಯೋಗ ಮಾಡುವ ಆಲೋಚನೆಯಿರುವುದೋ?" ಎಂದು ವಿಚಾರಿಸಿದರು.

ಅದಕ್ಕೆ ರಮೇಶನು ಸ್ವಲ್ಪ ಹೊತ್ತು ಉತ್ತರ ಕೊಡದೆ, ಕಡೆಗೆ,

"ನಾನು ಯಾವ ನಿರ್ಧಾರವನ್ನೂ ಮಾಡಿಲ್ಲ" ಎಂದುಸುರಿದನು.

"ಅದು ಸರಿ, ಹೀಗೆಯೇ ಎಷ್ಟು ಸಮಯದವರೆಗೆ ಇನ್ನೊಬ್ಬರ ಅನ್ನಕ್ಕೆ ಹೊರೆಯಾಗಿರಬಹುದು. ನೀನೇನು ಒಬ್ಬಂಟಿಗನಾಗಿ ದ್ದರೆ, ಈ ಪ್ರಶ್ನೆಯು ಉದ್ಭವಿಸುತ್ತಿದ್ದಿಲ್ಲ. ನಿನಗೂ ಹೆಂಡತಿ ಮಕ್ಕಳಿದ್ದಾರೆ. ಅವರ ಹೊಟ್ಟೆ ಬಟ್ಟೆಯನ್ನು ನೋಡಬೇಕಾಗಿದೆ. ಸುಖಕಷ್ಟವನ್ನೂ ನೋಡಬೇಕಾಗಿದೆ".

"ಅದೆಲ್ಲ ಸರಿ. ನಾನೂ ಅದನ್ನು ಒಪ್ಪುತ್ತೇನೆ. ಉಮೇಶನ ಜತೆಗೂಡಿ ತಂದೆಯ ವ್ಯಾಪಾರವನ್ನು ಬೆಳೆಸುವಂತಿಲ್ಲ. ಅವನ ಕೆಟ್ಟನಡತೆಗಳೆಲ್ಲ ಈಗ ಬಹಳವಾಗಿ ಬೆಳೆದಿರುವುವು. ನಾನು ಅಂಗಡಿಯಲ್ಲಿದ್ದರೆ ಅವನ ಮನಸ್ಸಿಗೆ ತೋರಿದಂತೆ ಹಣ ಹಾಳುಮಾಡಲು ಆಗುವುದಿಲ್ಲ ಮೇಲಾಗಿ ನಾನು ಕೂಡಾ ಅದಕ್ಕೆ ಹೊಣೆಗಾರನಾಗಿರುವೆನು."

"ಯಾವುದಕ್ಕೆ ಹೊಣೆಗಾರನು! ಅನ್ಯಾಯಕ್ಕೋ?"

"ಅದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಈಗಿನ ವ್ಯಾಪಾರದಲ್ಲಿ ಸಾಲ ಹೋಗುತ್ತದೆಂಬ ಹೆದರಿಕೆಯಿಲ್ಲ. ಪ್ರತಿಯೊಂದು ಪೈಯ ವ್ಯಾಪಾರವೂ ನಗದಿಯಾಗಿ ನಡೆಯುತ್ತದೆ. ಅಲ್ಲದೆ ಜೀನಸಿನೊಟ್ಟಿಗೆ ಕಸಕಡ್ಡಿಯನ್ನು ಬೆರಸಿಕೊಟ್ಟರೂ ಕೊಂಡುಕೊಳ್ಳುವವರಿದ್ದಾರೆ. ಲಾಭವೂ ತಲೆವಿೂರಿ ಹೋಗಿರುವುದು. ಒಂದು ಸಮಯದಲ್ಲಿ ವ್ಯಾಪಾರಿಗಳು ಬಾಯಿಬಿಟ್ಟು ನೊಣ ಹಾರಿಸುತ್ತಿದ್ದವರು ಇಂದು ಹೊಟ್ಟೆ ಬೆಳೆಸಿಕೊಂಡು ಕುಳಿತಿದ್ದಾರೆ. ಕಾಲಪರಿಸ್ಥಿತಿಯು ಅಲ್ಲಿಗೆ ಬಂದಿರುವುದಾದರೂ ನಮ್ಮ ಉಮೇಶನು ಹೆತ್ತ ತಾಯಿಗೆ ಒಂದು ತುತ್ತು ಅನ್ನವನ್ನು ಸಂತೋಷದಿಂದ ಕೊಡುತ್ತಿರುವುದಿಲ್ಲ. ಇದೆಲ್ಲ ಸರಿಹೋಗಬೇಕಾದರೆ ಆಡಳಿತೆಯನ್ನು ನಾನು ನೋಡಿಕೊಳ್ಳಬೇಕು. ಅಂಗಡಿಯ ವ್ಯವಹಾರವನ್ನು ನಡೆಸಬಲ್ಲೆನಾದರೂ ವ್ಯಾಪಾರಕ್ಕೆ ಬೇಕಾಗಿರುವ ದಕ್ಷತೆ ಮತ್ತು ನಿರ್ದಯತೆ ನನ್ನಲ್ಲಿಲ್ಲ. ಆದ್ದರಿಂದಲೇ ಉಮೇಶನಿಂದಾಗುವ ಕೆಡುಕಿಗೆ ಹೊಣೆಗಾರನು ನಾನೇ ಎಂದು ಒಪ್ಪಿಕೊಳ್ಳಬೇಕಾಗುತ್ತದೆ."

"ಇದು ಪ್ರತಿಯೊಬ್ಬರೂ ತಿಳಿದಿರುವ ವಿಷಯ. ವ್ಯಾಪಾರ ಕುಶಲತೆಯನ್ನು ಎಲ್ಲರೂ ತಿಳಿದವರಾಗಿರುವುದಿಲ್ಲ. ಅದಕ್ಕಾಗಿ ನೀನು ಇನ್ನೊಬ್ಬರಿಗೆ ಹೊರೆಯಾಗಿರುವುದು ಬೇಡ. ನಿನ್ನಂತೆ ಉದಾರತೆ ಎಲ್ಲರಲ್ಲಿಯೂ ಇರುತ್ತಿದ್ದರೆ ಚಿಂತಿಲ್ಲ. ಉದಾರಿಗಳಾಗುವುದಕ್ಕಿಂತ 'ಉಡಾರಿ'ಗಳಾಗಿ ಜೀವನ ಸಾಗಿಸುವುದಕ್ಕೆ ಜನರು ಹೆಚ್ಚಾಗಿ ಇಚ್ಛಿಸುತ್ತಾರೆ. ಆದಕ್ಕೆ ನನ್ನದೊಂದು ಅಭಿಪ್ರಾಯವಿದೆ. ನಿನಗೆ ಬೇಕಾದರೆ ಹೇಳುತ್ತೇನೆ........."

"ಹೇಳಿರಿ. ಯಾರ ಅಭಿಪ್ರಾಯವೇ ಆಗಲಿ. ತಿಳಿದು ಕೊಳ್ಳುವುದರಿಂದ ನಷ್ಟವಿಲ್ಲ."

"ಬೇರೇನೂ ಇಲ್ಲ. ನಿನಗೆ ನಾನೊಂದು ಅಂಗಡಿ ತೆರೆದು ಕೊಡುತ್ತೇನೆ. ಮೂಲ್ಕಿಯಲ್ಲಾದರೆ ಬೇರೆ ಅಂಗಡಿಯ ಅಗತ್ಯವಿಲ್ಲ. ಇಲ್ಲಿ ನಮ್ಮದೇ ಅಂಗಡಿಯಿದೆ. ನಿನಗೆ ಯಾವ ತೊಂದರೆಯೂ ಇಲ್ಲದೆ ಇರಬಹುದು. ಮಂಗಳೂರಿನಲ್ಲಿ ಸದ್ಯ ಅಂಗಡಿ ತೆರೆ

ಯಲು ಸ್ವಲ್ಪ ಕಷ್ಟವಿದೆ. ಆದರೂ ಪ್ರಯತ್ನಮಾಡಿ ನೋಡ ಬಹುದು. ಇದಕ್ಕೆ ನಿನ್ನ ಅಭಿಪ್ರಾಯವೇನು?"

"ಈ ರೀತಿಯಿಂದಲೂ ನಾನು ನಿಮ್ಮ ಮತ್ತು ನಿಮ್ಮ ಮನೆತನದ ಋಣಕ್ಕೆ ಬೀಳಬೇಕಾಗುತ್ತದೆ. ಹೀಗೆ ನಿಮ್ಮ ಋಣಗಾರನಾಗಿ ರುವುದಕ್ಕಿಂತ ನನ್ನ ಮನೆಯವರ ಅಧೀನದಲ್ಲಿಯೇ ಇರುವುದು ಲೇಸೆಂದು ತಿಳಿಯುತ್ತೇನೆ."

"ನಮ್ಮ ಋಣವೆಂದು ತಿಳಿಯಬೇಡ. ಯಾಕೆಂದರೆ ಇದರಿಂದ ನಾನಾಗಲೀ ಅಥವಾ ನನ್ನ ಮನೆಯವರಾಗಲೀ ಏನನ್ನೂ ಕಳೆದು ಕೊಳ್ಳುವುದಿಲ್ಲ. ತುಳಸಿಯು ಮದುವೆಯಾಗಿ ಹೋಗುವಾಗ್ಗೆ ನಾವು ಏನನ್ನೂ ಅವಳಿಗೆ ಕೊಟ್ಟರಲಿಲ್ಲ. ದೇವರ ದಯೆಯಿಂದ ನಾವೂ ಈಗ ಅನುಕೂಲವಂತರಾಗಿಯೇ ಇರುವೆವು. ನಾವು ಏನನ್ನು ಮಾಡಿಕೊಡುತ್ತೇವೋ ಅವಳ ಹೆಸರಿನಿಂದಲೇ ಮಾಡಿ ಕೊಡುತ್ತೇವೆ. ಆದ್ದರಿಂದ ನೀನು ನಮ್ಮ ಋಣಕ್ಕೆ ಬಾಧ್ಯನಾ ಗುವಂತಿಲ್ಲ. ಬೇರೆ, ನಿನ್ನ ಮತ್ತು ನಿನ್ನ ಹೆಂಡತಿಯ ಸಂಬಂಧ; ಗಂಡಹೆಂಡಿರ ಸಂಬಂಧದ ಕುರಿತು ಯಾರು ಏನನ್ನು ಹೇಳಲು ಸಾಧ್ಯವಿದೆ!"

ಈ ಮಾತಿಗೆ ರಮೇಶನು ಉತ್ತರ ಕೊಡಲಿಲ್ಲ. ಊಟ ಮುಗಿದು ಕೈ ಒಣಗಿದರೂ ಗೊಡವೆಯಿರಲಿಲ್ಲ. ಆಗ್ಗೆ ನಾರಾಯಣರಾಯರು,

"ಏಳುವ, ಮತ್ತೆ ಆಲೋಚಿಸಿ ಉತ್ತರ ಕೊಡು. ನನ್ನ ಮಾತಿಗೆ ದಾಕ್ಷಿಣ್ಯ ತೋರಿಸಿ ಉತ್ತರ ಕೊಡುವುದು ಬೇಡ. ಅಂಗಡಿ ತೆರೆದ ಮೇಲೆ ಹೊರಗಿನ ಚಟುವಟಿಕೆಗಳನ್ನೆಲ್ಲ ನಿಲ್ಲಿಸಿ ಬಿಡುವ ಪ್ರಸಂಗ ಬರಲೂ ಬಹುದು. ಅಂಗಡಿಯ ಹೆಸರು ನಾಲ್ಕು ಮಂದಿಯ ಬಾಯಿಯಲ್ಲಿ ಉಚ್ಚರಿಸಲ್ಪಡಬೇಕಾದರೆ, ವ್ಯಾಪಾರ ಹಿಡಿತದಲ್ಲಿ ಬರಬೇಕಾಗುತ್ತದೆ. ಅದೇನು ಸಣ್ಣ ವಿಷಯವೂ ಅಲ್ಲ. ತಮಾಷೆಯ ಸಂಗತಿಯೂ ಅಲ್ಲ" ಎಂದರು. ಅದಕ್ಕೆ,

"ನಿಮ್ಮ ಔಧಾರ್ಯಕ್ಕಾಗಿ ತುಂಬ ಆಭಾರಿಯಾಗಿರುವೆನು. ಈಗ ನಿಮ್ಮ ಯಾವ ಮಾತಿಗೂ ಉತ್ತರ ಕೊಡಲು ನನ್ನ ಮನಸ್ಸು ಒಪ್ಪುತ್ತಿರುವುದಿಲ್ಲ. ಒಂದೆರಡು ದಿನದೊಳಗೆ ಮಕ್ಕಳು ಮತ್ತು

ತುಳಸಿಯನ್ನು ಕರೆದುಕೊಂಡು ನಾನು ಮನೆಗೆ ಹೋಗುವೆನು. ಅಲ್ಲಿ ಕೆಲವು ದಿನ ತಡೆದು ಪರಿಸ್ಥಿತಿಯನ್ನು ಗೊತ್ತುಮಾಡಿಕೊಂಡು ಮತ್ತೆ ಮುಂದಿನ ನಿರ್ಧಾರಕ್ಕೆ ಬರುವೆನು. ಅಲ್ಲಿಯವರೆಗೆ ಸಮಾಧಾನ ತಾಳಿರಿ" ಎಂದೆನ್ನುತ್ತಾ ರಮೇಶನು ಎದ್ದನು. ನಾರಾಯಣರಾಯರೂ ಮುಖತೊಳೆಯಲು ಆವನನ್ನು ಅನುಸರಿಸಿದರು.

ರಮೇಶನು ಹೆಂಡತಿಮಕ್ಕಳನ್ನು ತನ್ನ ಮನೆಗೆ ಕರೆದುಕೊಂಡು ಬಂದ ನಂತರ ಅವನಲ್ಲಿ ಒಂದು ರೀತಿಯ ಉತ್ತೇಜನವು ಹೊಸತಾಗಿ ಮೂಡಿ ಬಂದಿರುವಂತೆ ತೋರಿಬಂದಿತು. ಅದನ್ನು ನೋಡಿ ಉಮೇಶನ ಮುಖ ತುಸು ಹೆಪ್ಪುಗಟ್ಟದಂತಾಯಿತು. ಆದರೆ ದಿನಹೋದಂತೆ ರಮೇಶನು ಅಂಗಡಿಯ ಬಳಿಗೆ ಸುಳಿಯದಿರುವುದನ್ನು ಕಂಡು ಮತ್ತೆ ನಗೆ ಮೂಡಿಬರುವಂತಾಯಿತು. ಇಷ್ಟರಲ್ಲಿ ರಮೇಶನು ಹಲವು ಬಾರಿ ಹಳೆ ಗೆಳೆಯರನ್ನು ಕಾಣಲು ಹೋಗಿ ಬಂದನು. ಆಗ್ಗೆ ಕೆಲವರು ಅವನ ಜತೆ ಮಾತಾಡಲು ಹೆದರಿ ದೂರ ಸರಿಯುತಿದ್ದುದೂ ಉಂಟು. ಜೈಲಿಗೆ ಹೋಗಿಬಂದವರ ಬೆನ್ನಹಿಂದೆ ಗುಪ್ತ ಪೋಲೀಸರು ತಿರುಗುತ್ತಿರುವರೆಂಬ ಹೆದರಿಕೆ ಎಲ್ಲರ ಕರುಳಿನಲ್ಲಿಯೂ ಸೇರಿಹೋಗಿರುವುದು. ಏನಾದರೊಂದು ರೀತಿಯ ಸಾರ್ವಜನಿಕ ಕಾರ್ಯಮಾಡುತ್ತಿದ್ದು ಅದರ ಜತೆಗೆ ಉದ್ಯೋಗ ಹಿಡಿದು ಜೀವನ ಸಾಗಿಸಲು ಸಾಧ್ಯವಿರುವುದೋ ಎಂಬ ಆಕಾಂಕ್ಷೆಯಿಂದ ರಮೇಶನು ಕೂಡಾ ಎರಡು ಧ್ಯೇಯ ಸಾಧನೆಗಾಗಿ ಬಹಳವಾಗಿ ಸುತ್ತಾಡಿದನು. ಪರೋಕ್ಷವಾಗಿ ಈ ಮೊದಲು ಕಾಂಗ್ರೆಸ್ಸಿಗೆ ನೆರವಾಗುತ್ತಿದ್ದವರು ಈಗ್ಗೆ ಯಾರೂ ಬಾಯ್ಬಿಟ್ಟು ಮಾತಾಡುವುದು ಕೂಡಾ ಇಲ್ಲ. 'ಡಿಫೆನ್ಸ್ ಆಫ್ ಇಂಡಿಯಾ' ಕಾನೂನು ಅವರ ಎದೆಯನ್ನು ಅಷ್ಟು ಜೋರಿನಿಂದ ತುಳಿದು ನಿಂತಿರುವುದು. ಕಡೆಗೆ ರಮೇಶನೂ ಅದೇ ಅವಸ್ಥೆಗೀಡಾಗಿ ಏನೊಂದು ಕೆಲಸ ಮಾಡಲೂ ಅಸಮರ್ಥನಾಗುವಂತಾದನು. ಕಾಂಗ್ರೆಸ್ಸಿನ ಹೆಸರು ಎಲ್ಲಿಯೂ ಕೇಳಿಬರುತ್ತಿದ್ದಿಲ್ಲ. ಕಮ್ಯುನಿಸ್ಟರ ಪ್ರಾಬಲ್ಯ ಸರ್ವದಿಕ್ಕಿನಿಂದಲೂ ಕಂಡುಬರುತ್ತಿತ್ತು. ಜಯಘೋಷ ಕೇಳಿಬರುತ್ತಿತ್ತು. ಕೆಲವು ವರುಷಗಳ ಮೊದಲು ಕಾಂಗ್ರೆಸ್ ಸೇವಕರಾಗಿದ್ದು ದುಡಿಯುತ್ತಿದ್ದವರೇ ಇಂದು ಕಾಂಗ್ರೆಸ್ಸಿನ ಕರೆಗೆ ಕಿವಿಗೊಡದೆ ಕಮ್ಯುನಿಷ್ಟರಾಗಿ ಸಾಮ್ರಾಜ್ಯಶಾಹಿ ಸರಕಾರಕ್ಕೆ ನೆರವಾಗಿ ಪ್ರೋತ್ಸಾಹಿಸುತ್ತಿದ್ದರು. ಕಾಂಗ್ರೆಸ್ ಧುರೀಣರು ಮತ್ತು ದೇಶಸೇವಕರು ಅಲ್ಲಿ ಕಾರಾಗೃಹದಲ್ಲಿ ಕೊಳೆಯುತ್ತಿರುವಾಗ್ಗೆ

ಬೇರೆ ಉಳಿದವರು ಇಲ್ಲಿ ಕಾಂಗ್ರೆಸ್ಸಿಗೆ ವಿರುದ್ಧವಾಗಿ ಕೆಲಸಮಾಡುವುದು ರಮೇಶನಿಗೆ ಸರಿಬೀಳಲಿಲ್ಲ. ತಾನಾಗಿ ಮುಂದೆ ನಿಂತು ಜನತೆಯನ್ನು ಸಂಘಟೀಕರಿಸುವಷ್ಟು ಧೈರ್ಯಶಾಲಿಯು ಅವನಾಗಿರಲಿಲ್ಲ. ಆ ಮಟ್ಟಿಗೆ ಅವನ ಯೋಗ್ಯತೆಯನ್ನು ಅವನೇ ತಿಳಿದಿದ್ದನು. ಬೇರೆ ಯಾರಾದರೂ ಜನತೆಯನ್ನು ಸಂಘಟೀಕರಿಸಲು ಮುಂದಾಗುತ್ತಿದ್ದರೆ ಅಂಥವರಿಗೆ ಸಹಾಯಕನಾಗಿ ಅವನು ಬೇಕಾದಷ್ಟು ಕೆಲಸಮಾಡಲು ಸಿದ್ಧನಾಗುತ್ತಿದ್ದ. ಈಗ ಅವನಿಗೆ ದೇಶಸೇವೆ ಮಾಡಲು ಯಾವದೊಂದು ಮಾರ್ಗವೂ ಇಲ್ಲದಂತಾಯಿತು. ತಾನಾಗಿ ಮುಂದೆ ಹೋಗುವಂತಿಲ್ಲ. ಅವನಂಥವರನ್ನು ಮುಂದೆ ಸಾಗಿಸುವ ಬಲಿಷ್ಠ ಕಾಂಗ್ರೆಸ್ ಕಾರ್ಯಕರ್ತರು ಯಾರೂ ಕಾರಾಗೃಹದಿಂದ ಬಿಡುಗಡೆ ಹೊಂದಿರಲಿಲ್ಲ. ಅಲ್ಲದೆ ಕಮ್ಯುನಿಸ್ಟರ ಸಂಘಟನೆಯು ಎಲ್ಲಿಯ ವರೆಗೆ ಮುಂದೆ ನಡೆದಿರುವುದೆಂದರೆ ಎಲ್ಲಿಲ್ಲದ 'ಯೂನಿಯನ್'ಗಳು ಮಂಗಳೂರಿನಲ್ಲಿ ಹುಟ್ಟಿಕೊಂಡಿದ್ದವು. ಬೀಡಿಮಜೂರರ ಯೂನಿಯನ್, ಹಂಚು ಕಾರಖಾನೆಗಳ ಮಜೂರರ ಯೂನಿಯನ್, ಹೊಟೇಲು ಕೆಲಸಗಾರರ ಯೂನಿಯನ್ ಮೊದಲಾದುವುಗಳು. ಅದರಿಂದಾಗಿ ದಿನಾಲು ಒಂದಲ್ಲ ಒಂದು ಕಡೆ ಕಮ್ಯುನಿಸ್ಟರ ಸಭೆ ಜರುಗುತ್ತಲಿತ್ತು. ರಮೇಶನ ಮನಸ್ಸು ಇದನ್ನು ನೋಡಿ ಬಹಳ ನೊಂದುಕೊಂಡಿತು. ಅನ್ನ ಆಹಾರದ ಕೂಗು ನಾಲ್ಕು ಕಡೆಯಿಂದಲೂ ಕೇಳುತ್ತಲಿತ್ತು. ಇಲ್ಲಿ ದೇಶದ ಸೇವಕರೆಂದೆನ್ನಿಸಿಕೊಳ್ಳುವವರೇ ಬೇರೊಂದು ಬಣ್ಣಬಳಸಿ, ವೇಷಧರಿಸಿ, ದೇಶದ ಮುಖಂಡರ ಮಾತುಮೀರಿ ಅವರು ಕಾರಾಗೃಹದಲ್ಲಿರುವ ಸಂದರ್ಭ ನೋಡಿ ಸಾಮ್ರಾಜ್ಯಶಾಹಿ ಸರಕಾರಕ್ಕೆ ಪ್ರೋತ್ಸಾಹನೆ ಕೊಡುತ್ತಿರುವರು. ರಮೇಶನಿಗೆ ಇದು ತೀರಾ ಅನ್ಯಾಯವೆಂಬುದಾಗಿ ಕಂಡುಬಂದಿತು. ಈ ರೀತಿ ದೇಶದ ಮುಖಂಡರ ಮಾತು ಮೀರಿ ವರ್ತಿಸುವುದಕ್ಕಿಂತ ಏನೂ ಕೆಲಸ ಮಾಡದೆ ಮರ್ಯಾದೆಯಿಂದ ಮನೆಯಲ್ಲಿ ಕುಳಿತಿರುವುದು ಒಳಿತೆಂದು ಅವನಿಗೆ ಮನವರಿಕೆಯಾಯಿತು. ಅದೇ ನಿರ್ಧಾರವನ್ನು ಅವನು ಗಟ್ಟಿಮಾಡಿಕೊಂಡು, ತಾನೂ ಬದುಕಬೇಕೆಂದು ಬಗೆದು ಎಲ್ಲಿಯಾದರೂ ನೌಕರಿ ಹುಡುಕಲು ಆರಂಭಮಾಡಿದನು. ಆಗ್ಗೆ ಸರಕಾರದ ಕಚೇರಿಗಳಲ್ಲಿ ಬೇಕಾದಷ್ಟು ನೌಕರಿಗಳು ಸಿಗುತ್ತಿದ್ದುವು. ಸರಿಯಾಗಿ ಇಂಗ್ಲೀಷು ಭಾಷೆ ಮಾತಾಡಲು ಗೊತ್ತಿಲ್ಲದವರು ಮತ್ತು ಸರಿಯಾದ ವ್ಯವಹಾರ ಜ್ಞಾನವಿಲ್ಲದವರು ಕೂಡಾ ಸರಕಾರಿ ಕಚೇರಿಗಳಲ್ಲಿ ನೌಕರಿ ಹಿಡಿದಿದ್ದರು. ಆದರೆ ಆ ನೌಕರಿ

ಮಾಡಲು ರಮೇಶನ ಮನಸ್ಸು ಹೇಸಿಕೊಂಡಿತು. ಯಾರು ಏನು ಹೇಳಿದರೂ ಅಲ್ಲಿಗೊಂದು ಅರ್ಜಿಯನ್ನು ಕೂಡಾ ಅವನು ಬರೆಯದಾದನು.

ಹೀಗೆ ಅವನು ಕೆಲವು ದಿನಗಳ ವರೆಗೆ ನಗರದಲ್ಲಿ ಸುತ್ತಾಡಿ ಎಲ್ಲಾ ಕಡೆಯ ಪರಿಸ್ಥಿತಿಗಳನ್ನು ತಿಳಿದುಕೊಂಡನಂತರ, ಒಂದು ಸಪ್ತಾಹಿಕ ಪತ್ರಿಕೆಯ ಕಚೇರಿಯಲ್ಲಿ ಒಂದು ನೌಕರಿಯನ್ನು ಹಿಡಿಯುವಂತಾದನು. ಸಾಮಾಜಿಕ ಚಟುವಟಿಕೆಗಳಲ್ಲಿ ಸೇರಿಕೊಂಡು ದುಡಿದಿರುವುದರಿಂದ ಅವನಲ್ಲಿ ಸಾಮಾನ್ಯ ಜ್ಞಾನವು ಬೆಳೆದಿತ್ತು. ಓದುಬರೆಯುವುದನ್ನು ಅಭ್ಯಾಸದಲ್ಲಿಟ್ಟುಕೊಂಡಿರುವುದರಿಂದ ಸಣ್ಣಲೇಖನಗಳನ್ನು ಬರೆಯುವ ಶಕ್ತಿಯೂ ಬಂದಿತ್ತು. ಆದರೆ ಏನೊಂದು ವಿಷಯವನ್ನು ಬರೆಯಲು ಅವನಿಗೆ ಪತ್ರಿಕೆಯಲ್ಲಿ ಎಡೆ ಸಿಗುತ್ತಿದ್ದಿಲ್ಲ. 'ವಾರ್ತಾಪತ್ರ ನಿರ್ಬಂಧಾಜ್ಞೆ'ಯಿಂದಾಗಿ ಪತ್ರಿಕೆಗಳ ಪುಟಗಳೆಲ್ಲ ಕಡಮೆಯಾಗಿದ್ದವು. ಇದೇ ಬೇನೆಯು ಮಂಗಳೂರಿನಲ್ಲಿದ್ದ ಎಲ್ಲಾ ಸಪ್ತಾಹಿಕಗಳಿಗೂ ತಾಗಿತ್ತು.! ಜೀವಹಿಡಿದಿದ್ದ ಇನ್ನು ಕೆಲವು ಪುಟಗಳಲ್ಲಿ ಜಾಹಿರಾತುಗಳು ತುಂಬಿದ್ದವು. ಸಾಮಾನ್ಯ ವಿಷಯಗಳಿಗೆ ಮತ್ತು ಸುದ್ದಿಗಳಿಗಾಗಿ ಬರೇ ಸ್ವಲ್ಪ ಪುಟಗಳಿದ್ದವು. ಅವುಗಳಲ್ಲಿ ಇಂಗ್ಲೀಷು ಪತ್ರಿಕೆಯಲ್ಲಿ ಬರುತ್ತಿರುವ ಸುದ್ದಿಗಳ ಕೆಲವು ಅನುವಾದಗಳನ್ನೋ ಜಿಲ್ಲಾ ವರ್ತಮಾನಗಳನ್ನೋ ಸೇರಿಸಿಬಿಟ್ಟರೆ ಪತ್ರಿಕೆ ತುಂಬುತ್ತಿತ್ತು. ಮಾಸಿಕ ವೇತನವಾಗಿ ಸಿಗುತ್ತಿದ್ದ ಐವತ್ತು ರೂಪಾಯಿಯಾದರೂ ರಮೇಶನಿಗೆ ಕಡಮೆಯಾಗಿ ಕಾಣುತ್ತಿದ್ದಿಲ್ಲ. ಸ್ವಂತ ವಿಚಾರವನ್ನು ಬಿಚ್ಚುಮನಸ್ಸಿನಿಂದ ಜನತೆಯ ಎದುರಿಗೆ ತರುವ ಅವಕಾಶವು ಇಲ್ಲದಿರುವುದು ಅವನಿಗೆ ತುಂಬಾ ನೋವನ್ನುಂಟು ಮಾಡಿತು. ಸದ್ಯದ ಸ್ಥಿತಿಯಲ್ಲಿ ಸರಕಾರದ ಆಜ್ಞೆಯು ಪತ್ರಿಕಾ ಸಂಪಾದಕರ ಕಣ್ಣು ಕೀಳುತ್ತಿದ್ದುದರಿಂದ ಯಾರೂ ಸರಕಾರವನ್ನು ಬಹಿರಂಗವಾಗಿ ಟೀಕಿಸಲು ಮುಂದಾಗುತ್ತಿದ್ದಿಲ್ಲ. ವಾಕ್‌ಸ್ವಾತಂತ್ರ್ಯವು ಸಂಪೂರ್ಣವಾಗಿ ಕಸಿದುಕೊಳ್ಳಲ್ಪಟ್ಟಿತ್ತು. ದೇಶದ ಸ್ಥಿತಿಯು ದಿನೇದಿನೇ ಕೆಡುತ್ತಲಿತ್ತು. ಬರಗಾಲದ ಕೂಗು ಕೇಳುತ್ತಲಿತ್ತು. ಅನ್ನ ಆಹಾರದ ತೊಂದರೆಯು ತಲೆಮೀರಿತ್ತು. ದಿನದಿನಕ್ಕೆ ನಿಮಿಷ ನಿಮಿಷಕ್ಕೆ ಸಾಮಾನುಗಳ ಬೆಲೆ ಏರುತ್ತಲಿತ್ತು. ಕಳ್ಳಪೇಟೆಯು ಕಾಲು ನೀಡಿ ಸಾಮಾನ್ಯ ಜನರನ್ನು ಹಿಂಡುತ್ತಲಿತ್ತು. ರಮೇಶನು ಪತ್ರಿಕಾಕಚೇರಿಯಲ್ಲಿ ಕೆಲಸಮಾಡುತ್ತಿದ್ದರೂ ಸಾಮಾನ್ಯ ವಿಷಯವನ್ನು ಎತ್ತಿ ಚರ್ಚಿಸಲು ಶಕ್ತನಾಗಿದ್ದರೂ ಕಣ್ಣಿಗೆ ಕಾಣುವ ಪ್ರತಿದಿನ ಪ್ರತಿ

ಘಳಿಗೆಯಲ್ಲಿ ಅನುಭವಿಸುವುದನ್ನು ಬರೆಯಲು ಎಡೆಯಿಲ್ಲದೆ ತತ್ತರಿಸುವನಾದನು. ಈ ಸ್ಥಿತಿಯಲ್ಲಿ ಮೂರು ತಿಂಗಳುಗಳನ್ನು ಪತ್ರಿಕಾ ವ್ಯವಸಾಯದಲ್ಲಿ ಕಳೆಯಬೇಕಾದರೆ ಅವನಿಗೆ ಎರಡು ವರುಷಗಳನ್ನು ಕಾರಾಗೃಹದಲ್ಲಿ ಕಳೆದುದಕ್ಕಿಂತಲೂ ಹೆಚ್ಚಿನ ವ್ಯಥೆಯಾಯಿತು. ಕಾರಾಗೃಹದಲ್ಲಿ ಹೊರಗಿನ ವಿಚಾರ ಏನೂ ತಿಳಿಯುತ್ತಿದ್ದಿಲ್ಲ. ಏನು ಮಾಡಲೂ ಸಾಧ್ಯವಿಲ್ಲದೆ ಇರಬಹುದಿತ್ತು. ಆದರೆ ಈಗ! ಇದೇ ಸಂದರ್ಭದಲ್ಲಿ ಮನೆಯಲ್ಲಿ ಉಮೇಶ ಮತ್ತು ತುಳಸಿಯರೊಳಗೆ ಮತ್ತೊಮ್ಮೆ ಘರ್ಷಣೆಯಾಯಿತು.

ಈಗಿನ ಕೊರತೆಯ ಕಾಲದಲ್ಲಿ ಮನೆಯ ಖರ್ಚಿಗಾಗಿ ಎಷ್ಟು ತಂದು ಹಾಕಿದರೂ ಸಾಕಾಗುವುದಿಲ್ಲ, ತಿನ್ನುವವರು ಹೆಚ್ಚಿದ್ದಾರೆ, ಎಂಬುದಾಗಿ ಉಮೇಶನು ಆಗಾಗ್ಗೆ ಗೊಣಗುಟ್ಟುತ್ತಿದ್ದನು. ಮನೆಯಲ್ಲಿ ಅವನಿಗೆ ಯಾರೂ ಉತ್ತರವನ್ನು ಕೊಡುತ್ತಿದ್ದಿಲ್ಲ. ತುಳಸಿಗೆ ಇದನ್ನು ಕೇಳಿ ಸಹಿಸಿಕೊಂಡಿರಲು ಆಗುತ್ತಿದ್ದಿಲ್ಲ. ಇಂದು ಅವಳು ಉಮೇಶನನ್ನು ಎದುರಿಸಿದಳು.

> "ಮನೆಯಲ್ಲಿರುವವರಿಗೆ ಅನ್ನ ಹುಡುಕುತ್ತಿರುವೆನೆಂದು ಜಂಭ ಕೊಚ್ಚಿಕೊಳ್ಳುತ್ತಿರುವುದು ಬೇಡ. ಅಂಗಡಿಯಲ್ಲಿ ಕುಳಿತು ನೀನು ಅಕ್ಕಿ ಕುಟ್ಟುತ್ತಿರುವುದಿಲ್ಲ. ಅಂಗಡಿಯಲ್ಲಿ ಕುಳಿತು ವ್ಯಾಪಾರ ಮಾಡಲು ನಿನಗೆ ಬೇಜಾರವಾಗುವುದಾದರೆ, ಹೇಳಿಬಿಡು. ನಾನು ಅಂಗಡಿ ನಡೆಸುತ್ತೇನೆ. ಅಂಗಡಿ ನಿನ್ನದಲ್ಲ. ಮನೆಯದ್ದು. ಅಂಗಡಿಯ ಉತ್ಪತ್ತಿಯಿಂದಲೇ ಮನೆಯ ಖರ್ಚು ವೆಚ್ಚ ನಡೆಯಬೇಕು. ಎಲ್ಲರನ್ನು ತನ್ನೊಡನೆ ದುಡಿಸಿಕೊಂಡು ಅಂಗಡಿ ವ್ಯಾಪಾರವನ್ನು ಬೆಳೆಸುವುದು ನಿನಗೆ ಬೇಡವಾಗಿದೆ. ಆದ್ದರಿಂದಲೇ ಮನೆಯಲ್ಲಿರುವವರಿಗೆ ಅನ್ನ ಹುಡುಕುವುದು ನಿನಗೆ ಕಷ್ಟದಾಯಕವೆಂದು ತೋರುವುದು. ಒಂದು ತಾಯಿಯ ಮಕ್ಕಳೊಳಗೆ ಹೀಗೆ ಅವನು ಇವನು ಎಂಬ ಭೇದ ತೋರಿಕೊಂಡರೆ, ಮುಂದೆ ಎರಡು ಪೀಳಿಗೆಗಳು ಹೆಚ್ಚಾದಾಗ ಒಬ್ಬರಿಗೆ ಇನ್ನೊಬ್ಬರ ಪರಿಚಯ ಕೂಡಾ ಇರಲಿಕ್ಕಿಲ್ಲ" ಎಂದು ಸಾವಧಾನ

ದಿಂದಲೇ ಗಂಭೀರದಿಂದ ಹೇಳಿ ತೋರಿಸಿದಳು. ಮೊದಲಿಗೆ ಅವಳ ಮಾತಿಗೆ ಸೂಕ್ತವಾದ ಉತ್ತರ ಕೊಡಲು ಆಗದಿದ್ದರೂ ಅವನು ತನ್ನ ದೌರ್ಬಲ್ಯವನ್ನು ತೋರಿಸಗೊಡದೆ,

"ನಿನ್ನ ಉಪದೇಶ ನನಗೆ ಬೇಡ. ನನ್ನ ಸ್ಥಾನದಲ್ಲಿ ನೀನು ಇರುತ್ತಿದ್ದರೆ ನನಗಿಂತಲೂ ಹೆಚ್ಚಿಗೆ ನೀನು ಮಾತಾಡುತ್ತಿದ್ದೆಯೇನೋ? ಭೂತದಂತೆ ಬೇಸೆಬೇಸರಿಕೆ ತೋರಿಸದೆ ಒಬ್ಬನೇ ದುಡಿದು ಇಷ್ಟು ದೊಡ್ಡ ಕುಟುಂಬದ ಹೊಟ್ಟೆ ತುಂಬಿಸುವಾಗ್ಗೆ ನನ್ನ ಹೊಟ್ಟೆಯೊಳಗೂ ಹೊಗೆಯೇಳುತ್ತದೆ" ಎಂದಂದನು.

"ನಿನ್ನ ನಡತೆಯಿಂದಾಗಿಯೇ ಒಬ್ಬಂಟಿಗನಾಗಿ ದುಡಿಯಲು ಬಗೆದಿದೆ. ನಿನ್ನನ್ನು ಯಾರೂ ಒತ್ತಾಯದಿಂದ ದುಡಿಸುತ್ತಿರುವುದಿಲ್ಲ. ತನಗಿಂತ ಮೊದಲು ಹುಟ್ಟಿದವರು ಯಾರು, ಚೆನ್ನ ಹಿಂದೆ ಬಂದವರು ಯಾರು ಎಂಬುದನ್ನು ನೀನು ತಿಳಿದುಕೊಳ್ಳುತ್ತಿದ್ದರೆ, ಬೇರೆಯವರೆಂಬ ಭಿನ್ನಭೇದ ಹುಟ್ಟಲು ಎಡೆ ಸಿಗುತ್ತಿದ್ದಿಲ್ಲ. ತನ್ನ ತಪ್ಪಿಗಾಗಿ ಈಗ ಇನ್ನೊಬ್ಬರ ಮೇಲೆ ಏಕೆ ಉರಿದು ಬೀಳುವುದು?"

"ಇನ್ನೊಬ್ಬರ ಮೇಲೆ ನಾನು ಉರಿದು ಬೀಳುವುದೂ ಇಲ್ಲ. ಅವರ ಒಳಿತು ಕೆಡುಕೂ ನನಗೆ ಬೇಡ. ಅಂಥವರಿಗೆ ನಾನು ಇನ್ನು ಮುಂದೆ ಅನ್ನ ಹುಡುಕುವುದೂ ಇಲ್ಲ."

"ಮತ್ತೆ ಅದೇ ಮಾತು. ಈ ಮನೆಯಲ್ಲಿ ನೀನು ಯಾರಿಗೂ ಅನ್ನ ಹುಡುಕುತ್ತಿರುವುದಿಲ್ಲವೆಂದು ನಿನಗೆ ಈ ಮೊದಲೇ ಮಂದಟ್ಟಾಗಿ ಹೇಳಿ ತೋರಿಸಿರುವೆನು. ಈಗಲೂ ನಾನು ಅದನ್ನೇ ಹೇಳುತ್ತಿರುವೆ. ನಿನಗೆ ಅಂಗಡಿ ನಡೆಸಲು ಸಾಧ್ಯವಿಲ್ಲವಾದರೆ ಹೇಳಿಬಿಡು. ಗಂಡಸು ಮಾಡಲಾರದ್ದನ್ನು ಹೆಣ್ಣು ಹೆಂಗಸು ನಾನು ಮಾಡಿ ತೋರಿಸುತ್ತೇನೆ".

"ನೋಡು ತುಳಸೀ, ಯಾವಾಗಲೂ ನೀನು ನನ್ನ ಮುಖಕ್ಕೆ ಹೊಡೆದು ಮಾತಾಡುತ್ತೀ. ಇದು ನಿನಗೆ ಒಳ್ಳೇದಕ್ಕಲ್ಲ. ನನ್ನಂಥವನ ಎದುರಿಗೆ ನಿನ್ನಂಥವಳು ನಿಂತು ಮಾತನಾಡತಕ್ಕವಳಲ್ಲ. ನೀನು ಏನೆಂದು ನನ್ನನ್ನು ತಿಳಿದಿರುವಿ?" ಎಂದಂದಾಗ ಉಮೇಶನ ಮುಖ ಕೆಂಪೇರುತ್ತಾ ಬಂತು.

"ನಿನ್ನನ್ನು ನೀನು ಏನು ಬೇಕಾದರೂ ತಿಳಿದುಕೊಳ್ಳು. ನಾನು ನಿನ್ನನ್ನು ವಿಲಾಸಿ ಬಾಯಿಬಡುಕನೆಂದು ತಿಳಿದುಕೊಂಡಿರುವೆ. ನಿನಗೆ ಇನ್ನೊಬ್ಬರ ಸುಖಕಷ್ಟವೇಗೊತ್ತಿಲ್ಲ..."

"ತುಳಸೀ ನೋಡು, ಬಾಯಿ ಬಿಗಿಹಿಡಿ."

"ನಿನ್ನಂಥವನ ದರ್ಪಕ್ಕೆ ಹೆದರುವವಳಾಗುತ್ತಿದ್ದರೆ, ಇಷ್ಟರೊಳಗೆ ಎಂದೋ ಈ ಮನೆಯಿಂದ ಹೊರದೂಡಲ್ಪಡುತ್ತಿದ್ದೆ. ಬಂಗಾರ ದಂತಹ ಹೆಂಡತಿ ಮನೆಯಲ್ಲಿದ್ದರೂ ನಾಯಿಯಂತೆ ಇನ್ನೊಬ್ಬರ ಬೆನ್ನು ಹತ್ತುವ ಅಭ್ಯಾಸವನ್ನು ನೀನು ಬಿಟ್ಟಿಲ್ಲ. ಮನೆಯಲ್ಲಿ ಊಟಕ್ಕೆ ಅನ್ನಯಿಲ್ಲದಿದ್ದರೂ ವಿಲಾಸಿ ಗೆಳೆಯರಿಗೆ ತಿನ್ನಿಸಿ ಉಣ್ಣಿಸಿ ದೊಡ್ಡಸ್ತಿಗೆ ತೋರಿಸುವುದನ್ನು ಬಿಡುವುದಿಲ್ಲ. ತನ್ನ ಬೆನ್ನ ಹಿಂದೆ ಬಂದವರ ಬದುಕು ನಿನ್ನ ಕೈಯಲ್ಲಿರುವುದಾದರೂ ಒಂದಿಷ್ಟು ತಿಳುವಳಿಕೆ ನಿನ್ನಲ್ಲಿಲ್ಲ. ಅಂಥವನ ಮುಖದೆದುರಿಗೆ ಮಾತಾಡಲು ನನಗೇತರ ಹೆದರಿಕೆ? ನಿನ್ನ ಈಗಿನ ತಾರುಣ್ಯ, ಕಟ್ಟಿಕೊಂಡಿರುವ ಅಹಂಭಾವ, ಬೆಳೆಸಿಕೊಂಡಿರುವ ಸೊಕ್ಕು ನಾಳೆಯೂ ನಿನ್ನೊಟ್ಟಿಗೆ ಇರಬಹುದೆಂದು ತಿಳಿದಿರುವೆಯಾ? ಇಂದು ನೀನು ಒಬ್ಬರನ್ನು ತುಳಿದರೆ, ನಾಳೆ ನಿನ್ನನ್ನು ತುಳಿಯಲು ಇನ್ನೊಬ್ಬರಿಗೆ ದಾರಿ ತೋರಿಸಿ ಕೊಟ್ಟಂತೆ. ಇಂದು ನೀನು ಮನೆ ಯವರಿಗೆಲ್ಲಾ ಅನ್ನ ಹುಡುಕುತ್ತಿರುವಿಯೆಂದು ಲೋಕದ ಜನ ರಿಗೆ ತಿಳಿಯುವುದಕ್ಕಾಗಿ ಡಂಗುರ ಬಾರಿಸಬೇಡ. ಎಲ್ಲದ್ದನ್ನು ನೋಡುವವನು, ಎಲ್ಲರನ್ನು ತಿಳಿದುಕೊಳ್ಳುವವನು ಒಬ್ಬನು ಬೇರೆಯೇ ಇದ್ದಾನೆ. ಅವನೇ ಎಲ್ಲರನ್ನೂ ಕಾಪಾಡುತ್ತಿದ್ದಾನೆ. ಅವರವರಿಗೆ ಬೇಕಾದ ದಾರಿಯನ್ನು ತೋರಿಸುತ್ತಿದ್ದಾನೆ." ಎಂದು ಒಂದೇ ಉಸಿರಿನಲ್ಲಿ ಪಟಪಟನೆ ಹೇಳಿ ಮುಗಿಸಿದಳು. ಅವಳ ಮಾತನ್ನು ಕೇಳಿ ಸಹಿಸಲು ಉಮೇಶನಿಂದಾಗಲಿಲ್ಲ. ತಾನು ಎಷ್ಟು ಉಬ್ಬಿ ಮಾತಾಡುತ್ತಿ ರುವೆನೋ ಅಷ್ಟೇ ತುಳಸಿಯೂ ಉಬ್ಬಿ ಉತ್ತರ ಕೊಡುತ್ತಿದ್ದುದರಿಂದ ಅವನ ತಲೆಯಲ್ಲಿ ಯಾವ ಯುಕ್ತ ವಿಚಾರವೂ ಹುಟ್ಟಲಿಲ್ಲ. ಅಂಗಡಿಯ ಅಧಿಕಾರ ವನ್ನು ಬೇರೆಯವರ ಕೈಗೆ ಒಪ್ಪಿಸಲು ಅವನು ಎಂದೂ ಸಿದ್ಧನಾಗಿರುವಂತಿಲ್ಲ. ಅಂಗಡಿಯು ಕೈಬಿಟ್ಟು ಹೋದರೆ ತನ್ನ ದೈನಂದಿನ ಚಟುವಟಿಕೆಗಳೆಲ್ಲ ನಿಂತು ಹೋಗುವುದೆಂಬುದನ್ನು ಅವನು ಚೆನ್ನಾಗಿ ಬಲ್ಲನು. ಅದರಿಂದಾಗಿ ತುಳಿಸಿಯ ಆಹ್ವಾನವನ್ನು ಸ್ವೀಕರಿಸಲು ಅವನು ಮುಂದಾಗುವಂತೆಯೂ ಇಲ್ಲ ಆದರೆ ತನ್ನ ಹೆಂಡತಿಯ ಎದುರಿಗೆ ಅಪಮಾನವಾಗುವುದನ್ನು ಯಾವ ಗಂಡಸೂ

ಸಹಿಸಿಕೊಳ್ಳುವಂತಿಲ್ಲ. ಅದು ಕೂಡಾ ಹೆಣ್ಣು ಹೆಂಗುಸಿನ ಕೈಯಿಂದ. ಹಾಗೆಯೇ ಸ್ವಲ್ಪ ಹೊತ್ತು ಸುಮ್ಮನಿದ್ದ ಉಮೇಶನು ತಟ್ಟನೆ ಎದ್ದುನಿಂತು,

"ಈ ಮನೆಯಲ್ಲಿರುವವರೆಲ್ಲ ಅನ್ನ ಕೊಟ್ಟವನಿಗೆ ಎರಡು ಬಗೆಯುಯುವವರೇ. ಯಾರಿಗೂ ಗುರುತುಯಿಲ್ಲ. ಎಲ್ಲರೂ ಕೃತಘ್ನರೇ" ಎಂದನ್ನುತ್ತಾ ಹೊರಗೆ ಹೊರಡಲನುವಾದ. ಆಗ್ಗೆ ತುಳಸಿಯು,

"ಉಪಕಾರ ಮಾಡಿದವರ ಗುರುತನ್ನು ಯಾರಾದರೂ ಮರೆಯುವುದನ್ನು ಕಲಿಯಬೇಕಾದರೆ ನಿನ್ನ ಒಡನಾಟದಿಂದಿರಬೇಕು. ನಿನ್ನನ್ನು ನಂಬಿ ಅಂಗಡಿಯ ಆಡಳಿತೆ ಒಪ್ಪಿಸಿಕೊಟ್ಟ ಗುರುತನ್ನು, ನಿನ್ನನ್ನು ನಂಬಿ ದೇಹವನ್ನು ಒಪ್ಪಿಸಿಕೊಟ್ಟವಳ ಪರಿಸ್ಥಿತಿಯನ್ನು, ನಿನ್ನ ಕೈಹಿಡಿದು ಬಂದವಳ ಆತ್ಮೀಯ ವಿಚಾರವನ್ನು ತಿಳಿದಾದರೂ ಕೃತಘ್ನತೆಯ ಅರಿವನ್ನು ಮಾಡಿಕೊಳ್ಳಬೇಕು." ಎಂದು ಮರುತ್ತರಿಸಿದಳು. ಈ ಮಾತನ್ನು ಕೇಳಿಕೊಂಡೇ ಉಮೇಶನು ಮನೆಯ ಮೆಟ್ಟಲಿಳಿದು ಅಂಗಳದಲ್ಲಿ ನಿಂತು,

"ನನ್ನನ್ನು ಅಪಮಾನಗೊಳಿಸಿದ ಪ್ರತಿಫಲವನ್ನುಣ್ಣಬೇಕಾದೀತು. ಅಂಗಡಿಗೆ ಬಾಗಿಲು ಹಾಕಿ ಹೊರಟು ಹೋಗುತ್ತೇನೆ. ಹೊಗೆ ಕಾರಿದ ಹೊಟ್ಟೆ ಹಸಿದಾಗ ತಿಳಿಯಬಹುದು" ಎಂದಂದನು.

"ಅಂಗಡಿಯ ಬಾಗಿಲನ್ನು ಮುರಿಯಲು ಊರಿನ ಜನರನ್ನು ಕರೆಯಬೇಕೆಂದಿಲ್ಲ. ಮನೆಗೆ ಏನು ಬೇಕೆಂಬುದನ್ನು ನಾನೂ ತಿಳಿದಿರುವೆನು. ಗಂಡುಸರಿಲ್ಲದ ಮನೆಯನ್ನು ಹೆಂಗುಸರು ನಡೆಸಬಲ್ಲರು. ಸಂಸಾರವನ್ನು ಆಳಬಲ್ಲರು. ಗಂಡುಸರಿಂದಾಗುವ ಕೆಲಸವನ್ನು ಹೆಂಗುಸರೂ ಮಾಡಬಲ್ಲರು. ಎಲ್ಲಿಗೆ ಬೇಕೋ ಅಲ್ಲಿಗೆ ಹೋಗಬಹುದು."

"ನಿನ್ನಂಥವಳ ಮಾತಿಗೆ ನಾನು ಬಗ್ಗುವವನಲ್ಲ. ಇನ್ನು ಮುಂದಕ್ಕೆ ಮನೆಗೆ ಏನನ್ನೂ ಕಳುಹಿಸಿ ಕೊಡುವುದಿಲ್ಲ. . ನೋಡುವ, ಏನಾಗುತ್ತದೆಂದು" ಎಂದಂದು ಉಮೇಶನು ಅಲ್ಲಿಂದ ಕಾಲು ಕಿತ್ತನು. ಆಗ್ಗೆ ತುಳಸಿಯು ಮನೆಬಾಗಿಲಿಗೆ ಬಂದು,

"ಮನೆಯವರನ್ನು ಉಪವಾಸ ಬೀಳಿಸಿದರೆ ನಿನ್ನ ಬಾಯಿಗೂ ಮಣ್ಣು ಮಾಡುವೆನು. ಮನೆಯವರಿಗೆ ಕೊಡದೆ ನೀನು ಒಬ್ಬನೇ

ತಿಂದರೆ, ಬೆಂಕಿಕೊಟ್ಟು ಸುಟ್ಟುಹಾಕುವೆನು. ನಿನ್ನನ್ನು ಹೀಗೆಯೇ ಬಿಡುತ್ತೇನೆಂದು ತಿಳಿಯಬೇಡ" ಎಂದಂದು ಮಾತು ಮುಗಿಸಿದಾಗ ಉಮೇಶನೂ ಕಣ್ಮರೆಯಾಗಿದ್ದನು. ತುಳಸಿಯು ಹೇಳಬೇಕಾದುದನ್ನು ಹೇಳಿ ಮುಗಿಸಿದಳು. ಆದರೂ ಅವಳ ಎದೆಯ ನೋವು ಕಡಮೆಯಾಗಲಿಲ್ಲ. ಅವಳ ಗಂಡನು ಮನೆಯ ಯಜಮಾನನಾಗಿ ಮನೆತನವನ್ನು ನಡೆಸುವವನಾಗುತ್ತಿದ್ದರೆ ಅವಳ ಮನಸ್ಸು ಸಮಾಧಾನ ಹೊಂದಬಹುದಿತ್ತೇನೋ. ಯಾವ ಸಂದರ್ಭ ದಲ್ಲಿಯೂ ಒಬ್ಬನು ದುಡಿಯದೆ, ಬದುಕುವುದಕ್ಕಾಗಿ ಇನ್ನೊಬ್ಬನಿಗೆ ಹೊರೆಯಾ ಗಿರುವುದು ಅವಳಿಗೆ ಸರಿಬೀಳುತ್ತಿದ್ದಿಲ್ಲ. ಧರ್ಮಾಧರ್ಮ ಸತ್ಯಾಸತ್ಯತೆಯ ಕುರಿತು ಚರ್ಚಿಸಲು ಎಲ್ಲರೂ ಶಕ್ತರೇ. ತಾನು ಮಾಡದೆ ಇನ್ನೊಬ್ಬರಿಗೆ ಮಾಡೆಂದು ಹೇಳುವುದು ತನಗೆ ಬೇಕಾಗಿ ಇನ್ನೊಬ್ಬನನ್ನು ದೂರುವುದು ಎಂದಿಗೂ ಸರಿಯಲ್ಲ ಎಂಬುದನ್ನು ಅವಳು ಬಲ್ಲಳು. ಇದನ್ನು ನೆನೆದು ಭಾರ ವಾದ ಎದೆಯನ್ನು ಹೊತ್ತುಕೊಂಡು ಅವಳು ಮನೆಯೊಳಗೆ ತಿರುಗಿ ಬಂದಾಗ ರಮೇಶನೂ ಮನೆಗೆ ಬಂದನು.

ರಮೇಶನು ಮನೆಗೆ ಬಂದು ಸುಮಾರು ಹೊತ್ತಾದರೂ ಮನೆಯಲ್ಲಿ ಯಾರೂ ಬಾಯ್ಬಿಟ್ಟು ಮಾತಾಡುವುದನ್ನು ಕೇಳಲಿಲ್ಲ. ಮನೆಯೊಳಗಿನ ವಾತಾವರಣವು ಮಳೆಗಾಲ ದಾಟದ ಮೇಲೆ ನದಿಯ ನೀರಿನಂತೆ ತಿಳಿಯಾಗಿ ಕಾಣುತ್ತಿದ್ದರೂ ಹೊತ್ತು ಮುಳುಗಿದ ನಂತರ ಮಬ್ಬುಕವಿಯುತ್ತಾ ಕತ್ತ ಲಾಗುವಂತೆ ಒಳಗೊಳಗೆ ಏನೋ ನಡೆದಿರಬೇಕೆಂದು ಅವನು ಊಹಿಸಿದನು. ಈಗೀಗ ಉಮೇಶ ಮನೆಗೆ ಬಂದು ಬಡಬಡಿಸ ತೊಡಗಿದನೆಂದರೆ ಯಾರೂ ಅವನಿಗೆ ಉತ್ತರ ಕೊಡಲು ಮುಂದಾಗುತ್ತಿದ್ದಿಲ್ಲ. ರಮೇಶನೂ ಅದನ್ನೇ ಯೋಚಿಸಿ ಉಮೇಶನ ದಬ್ಬಾಳಿಕೆ ನಡೆದಿರಬೇಕೆಂದು ಊಹಿಸುತ್ತಿದ್ದಾಗಲೆ ಅವನ ವಿಚಾರವು ಪತ್ರಿಕಾಕಚೇರಿಯ ಕಡೆಗೆ ಹರಿಯಿತು. ವಾಕ್‌ಸ್ವಾತಂತ್ರ್ಯ ವಿಲ್ಲದ, ಮನಸ್ಸಿನ ಅಭಿಪ್ರಾಯವನ್ನು ಬಿಚ್ಚಿ ಬರೆಯಲಾರದ, ಪತ್ರಿಕಾವ್ಯವ ಸಾಯವನ್ನೇ ಬಿಟ್ಟುಗೊಡಬೇಕೆಂದು ಬಗೆದಿದ್ದರೂ ಮನೆಯಲ್ಲಿನ ಈಗೀಗಿನ ಕ್ಷುಬ್ಧ ವಾತಾವರಣವು ಮನಸ್ಸನ್ನು ಚುಚ್ಚುತ್ತಲಿತ್ತು. ಈಗ ಅವನ ಪರಿಸ್ಥಿತಿ ಯನ್ನು ಅವನೇ ಅವಲೋಕಿಸಿ ನಿಟ್ಟುಸಿರಿಡುವಂತಾಯಿತು. ಸ್ವಲ್ಪ ಹೊತ್ತಿನ ನಂತರ ರಮೇಶನು ಮೆಲ್ಲನೆ ಒಳಗೆ ನಡೆದನು. ಆಗ್ಗೆ ತುಳಸಿಯು ಕಿಟ ಕಿಯ ಬಳಿ ನೆಲದಲ್ಲಿ ಕಾಲುನೀಡಿ ಕುಳಿತುಕೊಂಡು ಹೊರಗೆ ನೋಡುತ್ತ

ಲಿದ್ದಳು. ಕಾಲುಗಳ ಮೇಲೆ ಸಣ್ಣ ಮಗು ಕುಳಿತುಕೊಂಡಿತ್ತು. ಅವಳ ಮುಖ ಕಳೆಗುಂದಿತ್ತು. ಕಣ್ಣುಗಳು ಬಾಡಿದ್ದವು. ಬಾಗಿಲ ಬಳಿಯಲ್ಲಿ ರಮೇಶನು ನಿಂತಿರುವುದೂ ಅವಳ ಗೋಚರಕ್ಕೆ ಬಂದಿರಲಿಲ್ಲ. ಅವಳ ಬದಿಗೆ ಹೋಗಲು ರಮೇಶನ ಕಾಲುಗಳು ಮುಂದಾಗಲಿಲ್ಲ. ಬಹಳ ಹೊತ್ತಿನ ನಂತರ ರಮೇಶನು ತನ್ನನ್ನೆ ಸಾವರಿಸಿಕೊಂಡು ಹೆಂಡತಿಯ ಬಳಿಗೆ ಹೋದನು. ಆಗ ತುಳಸಿಯ ಧ್ಯಾನಭಂಗವಾಗಿ, ಕಣ್ಣೆತ್ತಿ, ಗಂಡನನ್ನು ನೋಡಿದಳು. ನೋಡಿ, ಕಣ್ಣುಗಳನ್ನು ಮುಚ್ಚಿಕೊಂಡಳು. ಕಣ್ಣೀರು ಹರಿದು, ಕಪೋಲಗಳ ಮೇಲಿಂದ ಇಳಿದು ಎದೆಯನ್ನು ತಣಿಸಿತು. ರಮೇಶನು ಅವಳ ಬಳಿ ಕುಳಿತುಕೊಂಡು ಶಾಲಿನಿಂದ ಅವಳ ಮುಖವನ್ನು ಒರಸುತ್ತಾ,

"ಎದುರು ಮಾತಾಡದೆ ಕುಳಿತುಕೊಳ್ಳಲು ನಿನಗೆ ಸಾಧ್ಯವೇ ಇಲ್ಲವೇನು?" ಎಂದು ಮೌನವನ್ನು ಮುರಿದು ಕೇಳಿದ.

"ಮರ್ಯಾದೆಯನ್ನು ಕಳೆದುಕೊಂಡು ಮಾತಾಡದೆ ಕುಳಿತುಕೊಳ್ಳುವುದರಲ್ಲಿಯೂ ಅರ್ಥವಿಲ್ಲ" ಎಂದು ತುಳಸಿಯು ಉಗುಳನ್ನು ನುಂಗಿಕೊಳ್ಳುತ್ತಾ ಉತ್ತರಿಸಿದಳು.

"ಮರ್ಯಾದೆಯು ಇನ್ನೊಬ್ಬರು ಕೊಡುವುದರಿಂದ ಅಥವಾ ಇನ್ನೊಬ್ಬರಿಂದ ತೆಗೆದುಕೊಳ್ಳುವುದರಿಂದ ಬರುತ್ತದೆಯೇನು? ಹಾಗೆ ಅದು ಕೊಂಡುಕೊಳ್ಳುವಷ್ಟು ಅಗ್ಗವಾಗಿರುವುದೇನು?"

"ನಿಮ್ಮ ದೃಷ್ಟಿಯಿಂದ ಮರ್ಯಾದೆಯು ಕೊಂಡುಕೊಳ್ಳುವ ವಸ್ತುವಾಗದೆ ಇರಬಹುದು. ಬೇರೆ ಎಷ್ಟೋ ಜನರ ದೃಷ್ಟಿಯಿಂದ ಅದು ಕೊಂಡುಕೊಳ್ಳುವ ವಸ್ತುವಾಗಿಯೇ ಇದೆ."

"ಈ ಮಾತನ್ನು ನಾನು ಒಪ್ಪುವುದಿಲ್ಲ. ನಿನ್ನ ನಂಬಿಗೆಯನ್ನು ನಾನು ಅಲ್ಲಗಳೆಯಲಾರೆನಾದರೂ ಮರ್ಯಾದೆಯ ಬೆಲೆಯನ್ನು ತಿಳಿದವರು ಬರೇ ಸ್ವಲ್ಪವೇ ಮಂದಿ ಇದ್ದಾರೆಂದು ನಿನಗೆ ಗೊತ್ತು ಮಾಡಲಿಚ್ಛಿಸುತ್ತೇನೆ."

"ನೀವು ಏತಕ್ಕಾಗಿ ಮಾತು ಬೆಳೆಸುತ್ತಲಿರುವಿರಿ ಎಂದು ನನಗೆ ಗೊತ್ತಾಗುವುದಿಲ್ಲ. ಬಹುಶಃ ನನ್ನ ಮನಸ್ಸಿನ ಬೇಸರವನ್ನು ಕಳೆಯಬೇಕೆಂಬ ವಿಚಾರವು ನಿಮ್ಮಲ್ಲಿರುವುದಾದರೆ ಒಪ್ಪುತ್ತೇನೆ. ಇಲ್ಲದೆ ಹೋದರೆ ನೀವು ನಿಮ್ಮ ತತ್ವಸಮರ್ಥನೆಗಾಗಿ ಮಾತು

ಬೆಳೆಸಿ ಉಳಿದವರನ್ನು ಉಸಿರುಕಟ್ಟಿಸಿ ಕೊಲ್ಲುವುದು ಬೇಡ" ಎಂದು ತುಳಸಿಯು ಮುಖವನ್ನು ಸೆರಗಿನಿಂದ ಒರಸುತ್ತಾ ಹೇಳಿದಳು. ಅದಕ್ಕೆ ತಕ್ಷಣವೇ ಉತ್ತರ ಕೊಡಲು ರಮೇಶನೂ ಮುಂದಾಗಲಿಲ್ಲ.

"ನೋಡು ತುಳಸೀ; ನೀನು ಹೇಳುತ್ತಿರುವುದನ್ನು ನಾನು ತಿಳಿಯುತ್ತೇನೆ. ನಿನ್ನ ಎದೆಯ ನೋವು ನನ್ನ ಎದೆಯನ್ನೂ ನೋಯಿಸುತ್ತದೆ. ಆದರೂ ನಿನ್ನ ಎಣಿಕೆಯಂತೆ ನಾನು ವರ್ತಿಸಲು ಅಸಮರ್ಥನಾಗಿರುವೆನು. ಮನುಷ್ಯನು ಎಷ್ಟು ತ್ಯಾಗಮಾಡಲು ಶಕ್ತನಾಗಬಹುದೋ ಅಷ್ಟನ್ನು ನಾನೂ ಮಾಡಲು ಪ್ರಯತ್ನಿಸಬಲ್ಲೆ. ಮನುಷ್ಯನಲ್ಲಿ ಎಷ್ಟು ಆಶೆಯಿರುವುದೋ ಆದನ್ನೂ ನಾನು ತ್ಯಜಿಸಬಲ್ಲೆ. ಯಾರಿಗಾದರೂ ನನ್ನಿಂದ ತೊಂದರೆ ಆಗುತ್ತಿರುವುದಾದರೆ ಅದಕ್ಕಾಗಿ ನಾನು ನನ್ನನ್ನು ಶಿಕ್ಷಿಸಬಲ್ಲೆ. ಇದಕ್ಕಿಂತಲೂ ಹೆಚ್ಚಿಗೇನನ್ನು ನನ್ನಿಂದ ನೀನು ಆಶಿಸುವೆ ತುಳಸೀ" ಎಂದು ಸಾವಧಾನದಿಂದ ನುಡಿದನು.

"ನಿಮ್ಮಿಂದ ಯಾರಿಗಾದರೂ ತೊಂದರೆಯಾಗಬಾರದೆಂಬ ವಿಚಾರವಿರುವುದಾದರೆ ನನ್ನನ್ನೇಕೆ ನೀವು ದುಃಖಕ್ಕೀಡುಮಾಡುತ್ತಿರುವಿರಿ. ನಾನು ಅಂಥಾ ಪಾಪಿಷ್ಠಳೇನು?"

"ಹಾಗೆ ಬೇಕಾದರೆ ನೀನು ತಿಳಿದುಕೊಳ್ಳು. ನನ್ನ ದೃಷ್ಟಿಯಲ್ಲಿ ಯಾರೂ ಪಾಪಿಷ್ಠರಲ್ಲ. ನಡತೆಯಲ್ಲಿ ಎಲ್ಲರೂ ತಪ್ಪಿ ಬೀಳುತ್ತಾರೆ. ಆದನ್ನು ತಿಳಿದುಕೊಂಡು, ಮುಂದೆ ಹಾಗಾಗದಂತೆ ವರ್ತಿಸುವುದೇ ಮನುಷ್ಯ ಧರ್ಮ. ನಿನ್ನ ಸುಖವನ್ನು ನಾನು ಕಡೆಗಣಿಸುತ್ತಿರುವೆನೆಂದು ತಿಳಿಯಬೇಡ. ನಿನ್ನನ್ನು ನಾನು ನನ್ನವಳೆಂದು ತಿಳಿದಿರುವುದರಿಂದ ನನ್ನಂತೆ ನೀನು ಕೂಡಾ ಇದ್ದುದರಲ್ಲಿ ತೃಪ್ತಿಹೊಂದಬಲ್ಲೆಯೆಂದು ನಂಬಿಗೆಯಿಂದಿರುವೆನು. ಆದೇ ಅಭಿಮಾನವು ನಿನ್ನನ್ನು ನನ್ನ ದೃಷ್ಟಿಯಲ್ಲಿ ಪವಿತ್ರವಾಗಿರಿಸಿದೆ. ಅದೇ ಸೌಹಾರ್ದತೆಯು ನಿನ್ನನ್ನು ನನ್ನ ಹೃದಯದಲ್ಲಿ ನೆಲೆಗೊಳಿಸಿದೆ".

"ನಿಮ್ಮ ಇಂಥಾ ವ್ಯವಹಾರದಿಂದಾಗಿ ನಾನು ದಿನನಿತ್ಯ ನವೆಬಡೆಯಲ್ಪಡುತ್ತಿರಬೇಕೇ? ದಿನನಿತ್ಯ ಮನಸ್ಸು ಮುರಿದುಕೊಂಡು

ಎದೆಸುಟ್ಟು ಕರಗುತ್ತಿರಬೇಕೇ? ಉಂಡ ಅನ್ನವು ಒಗ್ಗದೆ, ಹರಿಯು ತ್ತಿರುವ ಕಣ್ಣೀರು ಬತ್ತದೆ ನರಳುತ್ತಿರಬೇಕೇ? ತಲೆಗೆ ಎಣ್ಣೆ ಹಚ್ಚದೆ, ಕೂದಲು ಬಾಚದೆ, ಮುಖ ತೊಳೆಯದೆ ಇರಬೇಕೇ? ಗಂಡನ ಆಶ್ರಯದಲ್ಲಿ ಸೌಭಾಗ್ಯವತಿಯಾಗಿ ಇರಬೇಕಿದ್ದವಳಿಗೆ ಇದು ಶೋಭಿಸುವುದೇ? ನೀವೇ ಉತ್ತರಿಸಿರಿ".

"ಇಲ್ಲ, ಇದೆಲ್ಲ ಶೋಭಿಸಲಾರದು. ನಿನ್ನನ್ನು ಈ ಸ್ಥಿತಿಯಲ್ಲಿ ಕಂಡೂ ನನ್ನ ಕಣ್ಣುಗಳು ಒಡೆಯುವುದಿಲ್ಲ. ನಿನ್ನನ್ನು ದುಃಖಕ್ಕೀಡು ಮಾಡಿಯೂ ನನ್ನ ಎದೆ ಸೀಳಿ ಹೋಗುವುದಿಲ್ಲ. ಈಗ ನಾನು ಏನುಮಾಡಬೇಕೆಂದು ನನಗೆಯೇ ತಿಳಿಯುವುದಿಲ್ಲ."

"ನಿಮಗೆ ತಿಳಿಯವುದಿಲ್ಲ ಸಹಜ. ಯಾರೇ ಆಗಲಿ, ತನ್ನ ವಿಚಾರ ದಂತೆಯೇ ನಡೆಯುತ್ತಿರಬೇಕು. ಅಥವಾ ತನ್ನನರು, ತನಗಿಂತ ಸಬಲರು ಹೇಳಿಕೊಟ್ಟದ್ದನ್ನಾದರೂ ಕೇಳಿ ನಡೆಯಬೇಕು. ನೀವು ಇವುಗಳಲ್ಲಿ ಯಾವ ಮಾರ್ಗವನ್ನೂ ಅನುಸರಿಸಿ ನಡೆಯುತ್ತಿರು ವುದಿಲ್ಲ. ಆ ದಿನ ನಿಮಗೆ ನನ್ನಣ್ಣ ಏನು ಹೇಳಿದುದು? ಸ್ವಂತ ಅಂಗಡಿ ಮಾಡಿಕೊಡುವೆನು, ನಿರ್ಭೀತರಾಗಿ ಜೀವನ ಮಾಡಿ ರೆಂದು ಅಲ್ಲವೇ? ನೀವು ಅವರ ಮಾತನ್ನು ಕೇಳಿದಿರಾ? ಅಥವಾ ನಿಮ್ಮ ವಿಚಾರದಂತೆ ಏನನ್ನಾದರೂ ಮಾಡಿದಿರಾ? ಈಗಿನ ಉದ್ಯೋಗದಲ್ಲಿಯೂ ನಿಮಗೆ ಸಾಕಾಗುವಷ್ಟು ಆದಾಯ ಬರುತ್ತಿರುವುದಿಲ್ಲ. ದಿನದಿನಕ್ಕೆ ಅಕ್ಕಿಜೀನಸು ಬಟ್ಟೆಬರೆಗಳ ಬೆಲೆಯೇರುತ್ತಲಿದೆ. ಇದರ ಆಲೋಚನೆ ನಿಮಗೆ ಬಂದಿರುವು ದೇನು?"

"ಅದನ್ನೇ ಈಗ ಯೋಚಿಸುತ್ತಿರುವೆನು. ಪ್ರಸ್ತುತ ಸದ್ಯ ಮಾಡುತ್ತಿರುವ ನೌಕರಿಯಿಂದಲೂ ಕೈ ತೊಳೆದುಕೊಳ್ಳಬೇಕೆಂ ದಿರುವೆನು."

"ಬಹಳ ಒಳ್ಳೇ ಕಾರ್ಯ ಮಾಡುತ್ತಿರುವಿರಿ. ಮೊದಲೇ ಈ ಮನೆಯೊಳಗೆ ತಲೆಮರೆಸಿಕೊಂಡಿರಲು ಕಷ್ಟವಾಗಿದೆ. ಯಾವ ಉದ್ಯೋಗವನ್ನೂ ಸ್ಥಿರಗೊಳಿಸದೆ, ಇರುವುದನ್ನೂ ಕಳೆದು ಕೊಳ್ಳುವ ಆಲೋಚನೆ ಮಾಡುತ್ತಿರುವಿರಾ?"

"ಅದನ್ನೇ ನಾನೀಗ ಯೋಚಿಸುತ್ತಿರುವೆನು. ನಮ್ಮ ಅಂಗಡಿ ಯಲ್ಲಿಯೇ ನಿಂತು ಪರಿಸ್ಥಿತಿಗೆ ಹೊಂದಿಕೊಂಡು ಹೋಗಲು ಸಾಧ್ಯವಾಗುವಂತಿಲ್ಲ. ಹೊಸ ವ್ಯಾಪಾರವನ್ನು ಆರಂಭ ಮಾಡ ಬೇಕು. ಹಾಗೆ ಮಾಡಬೇಕಾದರೂ ಇನ್ನೊಬ್ಬರ ಹಣಕ್ಕೆ ಕೈಚಾಚಬೇಕಲ್ಲವೇ?"

"ಈ ಕಾಲದಲ್ಲಿ ಹಣದ ರೂಪದಲ್ಲಿ ಸಹಾಯ ಮಾಡುವವರೇ ಕಡಮೆ. ನನ್ನಣ್ಣನು ನಿಮ್ಮನ್ನು ವಂಚನೆಗೊಳಿಸಬೇಕೆಂಬ ಇರಾದೆಯಿಂದ ಹಾಗೆ ಹೇಳಿರಲಿಲ್ಲ. ಆದರೂ ನೀವು ಅವ ರನ್ನು ಪರರೆಂದು ತಿಳಿಯುತ್ತಿರುವಿರಿ. ಇದು ನನ್ನ ಹಣೆಬರಹ ವೆಂದು ತಿಳಿಯಬೇಕಾಗುತ್ತದೆ!"

"ನೀನು ಹೇಳುತ್ತಿರುವುದು ಸರಿ ತುಳಸೀ. ಆದರೆ ನನ್ನಂತೆ ನೀನು ಕೂಡಾ ಗಂಡುಸಾಗುತ್ತಿದ್ದರೆ, ತನ್ನ ಸುಖಕ್ಕಾಗಿ ಇನ್ನೊ ಬ್ಬರ ಕಡೆಗೆ ಕೈಚಾಚುವುದು ಎಷ್ಟು ಹೀನವಾದುದು ಎಂಬು ದನ್ನು ತಿಳಿಯುತ್ತಿದ್ದೆ."

"ನಾನು ಗಂಡುಸಾಗುತ್ತಿದ್ದರೆ ನಿಮ್ಮ ಬಳಿಯಲ್ಲಿ ಹೀಗೆ ಅಂಗ ಲಾಚಿಕೊಳ್ಳುತ್ತಿದ್ದಿಲ್ಲವೆಂಬುದನ್ನು ನೀವು ತಿಳಿಯಬೇಕು. ನಿಮಗೆ ಮನಸ್ಸಿಲ್ಲದಿದ್ದರೆ ಹಾಗೆ ಹೇಳಿಬಿಡಿರಿ. ಸುಮ್ಮನೆ ಯಾಕೆ ಮಾತು ಬೆಳೆಸುತ್ತಿರುವಿರಿ?"

"ಹಾಗಲ್ಲ. ಅಂದು ನಿನ್ನಣ್ಣ ಹೇಳುತ್ತಿದ್ದಾಗಲೇ ಒಪ್ಪಿಕೊಳ್ಳು ತ್ತಿದ್ದರೆ ಯಾವುದೇ ಒಂದು ಕಾರ್ಯ ಆಗಬಹುದಿತ್ತು. ಇಂದು ನಾನಾಗಿಯೇ ಅಲ್ಲಿಗೆ ಹೋಗಿ ಬಾಯ್ಬಿಟ್ಟು ಕೇಳುವುದಕ್ಕೆ ಮನಸ್ಸು ಒಡಂಬಡುತ್ತಿರುವುದಿಲ್ಲ."

"ಹಾಗಾದರೆ ನಾನೇ ಅಲ್ಲಿಗೆ ಹೋಗಿ ಈ ಮಾತನ್ನು ಅವರಿಗೆ ತಿಳಿ ಸುತ್ತೇನೆ. ನೀವು ಬಾಯ್ಬಿಟ್ಟು ಮಾತಾಡಿ ಸಣ್ಣದಾಗುವುದಕ್ಕಿಂತ ಬಾಯಿಮುಚ್ಚಿಕೊಂಡೇ ಮರ್ಯಾದೆಯಿಂದಿರಿ. ಈಗ ಅದರ ಅಗತ್ಯ ನನಗೆ ಬಂದಿರುವುದು. ನಾನೇ ಮಾತಾಡಿ ನೋಡುವೆನು"

ಎಂದು ತುಳಸಿಯು ಸ್ವಲ್ಪ ಕೋಪದಿಂದಲೇ ಹೇಳಿದಾಗ ರಮೇಶ ಉತ್ತರ ಕೊಡದಾದ. ಮತ್ತೆ ಸುಮಾರು ಹೊತ್ತಿನ ಮೇಲೆ,

"ನಾಳೆ ನೀನು ಮೂಲ್ಕಿಗೆ ಹೋಗುವಿಯಾ?" ಎಂದು ಕೇಳಿದನು.

"ಹೌದು, ಹೋಗಬೇಕಾಗುತ್ತದೆ. ತಾಯಿ ಮನೆಗೆ ಉಂಡುಟ್ಟು ಸುಖಪಡೆಯಬೇಕೆಂಬ ಆಶೆಯಿಂದ ಹೋಗದಿದ್ದರೂ ಇನ್ನು ಮುಂದಿನ ನಮ್ಮ ಮತ್ತು ಮಕ್ಕಳ ಪರಿಸ್ಥಿತಿಯನ್ನು ನೆನೆದು ಹೋಗಬೇಕಾಗುತ್ತದೆ."

ತುಳಸಿಯ ಈ ಮಾತಿಗೆ ರಮೇಶನು ಉತ್ತರ ಕೊಡಲೇ ಇಲ್ಲ. ಬಹಳ ಹೊತ್ತಿನ ಮೇಲೆ ಅಲ್ಲಿಂದ ಎದ್ದು ಹೊರಗೆ ಬರುತ್ತಾ,

"ಮೂಲ್ಕಿಗೆ ಹೋಗಿಯಾದರೂ ನಾಲ್ಕು ದಿನ ಸುಖದಿಂದಿರು" ಎಂದನು.

ಮರುದಿನ ತುಳಸಿ ಮತ್ತು ಮಕ್ಕಳನ್ನು ರಮೇಶನು ಮೋಟಾರು ಬಸ್ಸಿನಲ್ಲಿ ಕುಳ್ಳಿರಿಸುತ್ತಾ,

"ಇವತ್ತೇ ನಿನ್ನ ಎಲ್ಲಾ ವಿಚಾರವನ್ನು ನಿನ್ನಣ್ಣನಿಗೆ ಗೊತ್ತುಪಡಿಸಿ ಗಲಾಟೆ ಮಾಡಬೇಡ. ಈಗಲೂ ನಾನು ಯಾವುದೊಂದು ನಿರ್ಧಾರಕ್ಕೂ ಬಂದಿಲ್ಲ. ಯಾರ ಸಹಾಯವೂ ಇಲ್ಲದೆ ಎಲ್ಲರಂತೆ ಬದುಕು ಮಾಡಲು ಸಾಧ್ಯವೇ ಇಲ್ಲವೆಂಬ ತತ್ವವನ್ನು ಒಪ್ಪಿಕೊಳ್ಳುವ ಪರಿಸ್ಥಿತಿಗೆ ನಾನು ಬಂದಿಲ್ಲ. ನನ್ನ ಎಣಿಕೆಯು ಸರಿಯಾದರೆ ನಿನ್ನನ್ನು ಕರೆದೊಯ್ಯಲು ಮೂಲ್ಕಿಗೆ ಬರುತ್ತೇನೆ. ನಿನ್ನ ಎಣಿಕೆಯೇ ಸರಿಹೋಗುವಂತೆ ಕಂಡುಬಂದರೆ ನಿನ್ನ ಬಳಿಗೆ ನಾನಾಗಿಯೆ ಬಂದು ನೀನು ಹೇಳಿದಂತೆ ಕೇಳಿಕೊಂಡು ನಡೆಯುತ್ತೇನೆ. ಅಲ್ಲಿಯ ವರೆಗೆ ನಿನ್ನಣ್ಣನಿಗೆ ಯಾವ ವಿಚಾರವನ್ನೂ ತಿಳಿಸಬೇಡ. ಅಷ್ಟೆ ನನ್ನ ವಿನಂತಿ" ಎಂದಂದು ಹಿಂತಿರುಗಿ ಬಂದನು. ಈಗ ಅವನಿಗೆ ಎಲ್ಲಿಗೆ ಹೋಗಬೇಕೆಂದು ಹೊಳೆಯಲಿಲ್ಲ. ಪತ್ರಿಕಾ ಕಚೇರಿಯ ಕೆಲಸ ಸಾಕೆಂದು ಈ ಮೊದಲೇ ಅವನ ಮನಸ್ಸು ಒಡಂಬಟ್ಟಿದೆ. ತಮ್ಮನ ಸಂಪರ್ಕ ಬೇಡವೆಂದು ನಿರ್ಧರಿಸಿಯೂ ಆಗಿದೆ. ಇದನ್ನೆಲ್ಲ ಯೋಚಿಸುತ್ತಾ ದಾರಿನಡೆಯುತ್ತಿದ್ದವನು ತಡೆಹಿಡಿಯಲ್ಪಟ್ಟವನಂತೆ ತಟ್ಟನೆ ನಿಂತುಬಿಟ್ಟನು. ಮತ್ತೆ ಏನನ್ನೋ ಆಲೋಚಿಸಿ, ತಲೆಕೆರೆದು ತಿರುಗಿ ನೋಡಿದನು. ಮತ್ತೆ ಮೆಲ್ಲನೆ ಮುಂದೆ ನಡೆದನು. ತಾನು ನೌಕರಿ ಮಾಡುತ್ತಿದ್ದ ಪತ್ರಿಕಾ ಕಚೇರಿಯು ಎದುರಿಗೆ ಬಂದಾಗ ಕಾಲುಗಳು ತಾನಾಗಿಯೆ ನಿಂತುಹೋದವು.

ಆದರೂ ಕಚೇರಿಯ ಒಳಗೆ ಹೋಗಿ ತನ್ನ ಸ್ಥಳದಲ್ಲಿ ಸುಮ್ಮನೆ ಕುಳಿತು ಕೊಂಡನು. ಸ್ವಲ್ಪ ಹೊತ್ತಿನ ನಂತರ ಅಲ್ಲಿಗೆ ಪತ್ರಿಕಾ ಸಂಪಾದಕರು ಬಂದರು. ರಮೇಶನು ಏನೂ ಕೆಲಸಮಾಡದೆ ಕುಳಿತುಕೊಂಡಿರುವುದನ್ನು ಕಂಡು, ತುಸು ಗಂಭೀರವಾಗಿ—

"ಏನು, ಇಂದು ಕೆಲಸ ಮಾಡುವ ಆಲೋಚನೆಯಿಲ್ಲವೇನು?" ಎಂದು ಕೇಳಿದರು. ಅವರ ಮಾತಿಗೆ ರಮೇಶ ಉತ್ತರ ಕೊಡಲಿಲ್ಲ. ಮತ್ತೆ ಸ್ವಲ್ಪ ತಡೆದು,

"ಮೈಯಲ್ಲಿ ಹುಷಾರಿಲ್ಲ ತಾನೇ?" ಎಂದು ಕೇಳಿದರು. ಈಗಲೂ ರಮೇಶನು ಮಾತಾಡಲಿಲ್ಲ. ಅವರು ಮತ್ತೂ ತಡೆದು,

"ನೀವು ಎಷ್ಟೋ ಸಂದರ್ಭಗಳಲ್ಲಿ ನಮ್ಮ ಪತ್ರಿಕೆಯ ಕುರಿತಾಗಿ ನನ್ನ ಜತೆಯಲ್ಲಿ ಚರ್ಚೆಮಾಡಿರುವಿರಿ. ನಿಮ್ಮ ಎಲ್ಲಾ ಅಭಿಪ್ರಾಯಗಳನ್ನು ನಾನೂ ಒಪ್ಪುತ್ತಿದ್ದೇನೆ. ಆದರೆ ಪರಿಸ್ಥಿತಿಯನ್ನು ತಿಳಿದುಕೊಂಡೇ ಬದುಕಬೇಕಾಗುತ್ತದೆಂಬುದನ್ನು ನೀವೂ ಒಪ್ಪಬೇಕಾಗುವುದು. ಒಂದು ಕಾಲದಲ್ಲಿ ಪತ್ರಿಕೆಯಲ್ಲಿ ಬರೆಯಲು ಸಂಪಾದಕರಿಗೆ ಏನೂ ವಿಷಯವು ಇಲ್ಲದೆ ಹೋಗಿರಬಹುದು. ಅಂದರೆ ಪತ್ರಿಕಾವ್ಯವಸಾಯವನ್ನು ನಾವು ಆಷ್ಟೊಂದು ರೀತಿಯಿಂದ ಮೈಗೂಡಿಸಿಕೊಳ್ಳದಿರುವುದೂ ಒಂದು ಕಾರಣವಾಗಿರಬಹುದು. ಆದರೆ ಈಗಿನ ಕಾಲವು ಅಂಥದಲ್ಲ. ಬರೆಯುವುದು ಬೇಡವೆಂದಿದ್ದರೂ ಅನ್ನಆಹಾರದ ತೊಂದರೆಯು ಹೊಟ್ಟೆಯನ್ನು ಚುಚ್ಚಿ ಬಾಯಿಯಿಂದ ನಾಲ್ಕು ಮಾತು ಹೊರಡಿಸುತ್ತದೆ. ದಿನ ನಿತ್ಯದ ಸಮಸ್ಯೆಯು ಮನಸ್ಸನ್ನು ಮುರಿದು ನಾಲ್ಕು ಶಬ್ದ ಒಡ ನುಡಿಸುತ್ತದೆ. ಹಾಗಿರುವುದಾದರೂ ವಾಕ್‌ಸ್ವಾತಂತ್ರ್ಯ ಕಸಿದುಕೊಳ್ಳಲ್ಪಟ್ಟಿರುವುದರಿಂದ ಬಾಯಿಕಟ್ಟಿ ನಾಲಗೆ ಬಿಗಿದು ಕುಳಿತುಕೊಳ್ಳಬೇಕಾಗುತ್ತದೆ. ಅದಕ್ಕಿಂತ ಮುಂದೆ ಹೋಗಲು, ಬಂಧನವನ್ನು ಕಡಿದೊಗೆಯಲು ಹಸಿದ ಹೊಟ್ಟೆ ಮತ್ತು ಬೆಳೆದ ಕುಟುಂಬ ಬಿಡುವುದಿಲ್ಲ. ನೀವು ಎಳೆವಯಸ್ಸಿನವರು. ನಿಮ್ಮ ವಿಚಾರವೂ ಪ್ರಗತಿಪರವಾಗಿರುವುದು ಸಹಜ. ನಿಮಗೆ ಇಲ್ಲಿ ಅಲ್ಲದೆ ಹೋದರೆ ಬೇರೆ ಎಲ್ಲಿಯಾದರೂ ಉದ್ಯೋಗ ಸಿಗಬಹುದು. ಪತ್ರಿಕೆಯೂ

ಬದುಕಬೇಕು ಹಾಗೂ ನಾವೂ ಬದುಕಬೇಕೆಂದಿರುವಾಗ್ಗೆ ಸರಕಾರದ ವ್ಯವಹಾರವನ್ನು ಟೀಕಿಸಿ ಪರಿಸ್ಥಿತಿಯನ್ನು ಅವಲೋಕಿಸಿ ಈಗಿನ 'ಓರ್ಡಿನೇನ್ಸ್' ಯುಗದಲ್ಲಿ ಬರೆಯಲು ಸಾಧ್ಯವಿದೆಯೇನು? ನೀವೇ ಆಲೋಚಿಸಿ ನೋಡಿರಿ. ಮನಸ್ಸು ಒಪ್ಪುವುದಾದರೆ ನಮ್ಮೊಡನೆ ಕೆಲಸ ಮಾಡಿರಿ. ಇಲ್ಲದೆ ಹೋದರೆ ನಮಗೆ ಏನು ಮಾಡಲು ಸಾಧ್ಯವಿದೆ! ನಿಮಗೆ ತಿಳಿದಂತೆ ಮಾಡಿರಿ" ಎಂದನ್ನುತ್ತಾ ಒಂದು ದೀರ್ಘ ಉಸಿರೆಳೆದು ಬಿಟ್ಟು ಸಂಪಾದಕರು ಹಿಂತಿರುಗಿದರು.

ಸಂಜೆಗೆ ಮನೆಗೆ ಬಂದು ರಮೇಶನು ಯಾರ ಕೂಡೆಯೂ ಮಾತಾಡದೆ ಸುಮ್ಮನೆ ಮಲಗಿಕೊಂಡನು. ಅವನ ಮುಖದ ಬಣ್ಣ ಬದಲಾಗಿತ್ತು. ವಿಚಾರ ಬೂದಿಮುಚ್ಚಿತ್ತು. ರಾತ್ರಿಯಾಗುತ್ತಲೇ ತಾಯಿ ಊಟಕ್ಕೆ ಕರೆದಳು. ಉತ್ತರವೇ ಸಿಗಲಿಲ್ಲ. ಗೋಪಾಲನು ಊಟ ಮುಗಿಸಿಕೊಂಡು ಬಂದವನು ತಾಯಿಯ ಹೇಳಿಕೆಯಂತೆ ಹಿರಿಯಣ್ಣನನ್ನು ಕರೆಯಲು ಬಂದನು. ಆಗಲೂ ಅವನು ಮಾತಾಡಲಿಲ್ಲ. ತೆರೆದ ಕಣ್ಣು ಮುಚ್ಚದೆ ಕತ್ತಲೆಯಲ್ಲಿ ಅವನು ಕಿಟಕಿಯ ಮುಖಾಂತರ ಹೊರಗೆ ನೋಡುತ್ತಲಿದ್ದನು. ತುಳಸಿಯು ಮನೆಯಲ್ಲಿರುತ್ತಿದ್ದಾಗ್ಗೆ ಈ ಕೋಣೆಯು ಅವನಿಗೆ ಯಾವಾಗಲೂ ಮದುವೆಯ ಮನೆಯಂತೆ ತೋರಿಕೊಳ್ಳುತ್ತಲಿತ್ತು. ಮಕ್ಕಳು ಆಡುತ್ತಾ, ಓಡುತ್ತಾ, ಬೀಳುತ್ತಾ ಹೆತ್ತವರ ಹೃದಯವನ್ನು ತುಂಬಿಡುತ್ತಿದ್ದವು. ಆ ದೃಶ್ಯ ಇಂದು ಕಾಣಲು ಸಿಗುತ್ತಿದ್ದಿಲ್ಲ. ರಮೇಶನ ಮನಸ್ಸು ನಿಮಿಷನಿಮಿಷಕ್ಕೆ ಹೆಚ್ಚೆಚ್ಚು ಭಾರವಾಗುತ್ತಾ ಬರುತ್ತಲಿತ್ತು. ಆಗ್ಗೆ ಅವನ ಕಣ್ಣುಗಳು ತುಂಬಿ ಬಂದವು.

ಇದೇ ರೀತಿ ಅವನು ಐದು ದಿನಗಳನ್ನು ಮನೆಯಲ್ಲಿಯೇ ಇದ್ದು ಕಳೆದನು. ಉಣ್ಣುವ ಮನಸ್ಸೂ ಇದ್ದಿಲ್ಲ. ಹೊಟ್ಟೆಯಲ್ಲಿ ಹಸಿವೂ ಇದ್ದಿಲ್ಲ. ಐದು ದಿನಗಳಲ್ಲಿ ಐದು ಹೊತ್ತು ಊಟ ಕೂಡಾ ಮಾಡಿಲ್ಲ. ಇದನ್ನು ನೋಡಿ ಸೀತಕ್ಕನ ಹೆತ್ತ ಕರುಳು ಕರಗಿತು. ಅವಳು ಪದೇಪದೇ ಬಂದು ಹೇಳಿ ನೋಡಿದರೂ ಏನೂ ಪ್ರಯೋಜನ ಕಾಣಲಿಲ್ಲ. ಆರನೇ ದಿನ ರಮೇಶನು ಯಾರಿಗೂ ತಿಳಿಸದೆ ಅಂಗಡಿಗೆ ಹೋಗಿ ಕುಳಿತುಕೊಂಡನು. ಅವನು ಏಕೆ ಬಂದಿರುವುದು ಎಂದು ಈ ಸರ್ತಿಯೂ ಉಮೇಶನು ವಿಚಾರಿಸಲಿಲ್ಲ. ರಮೇಶನೂ ತಾನಾಗಿ ಏನನ್ನೂ ಮಾತಾಡಲಿಲ್ಲ. ಬೆಳಿಗ್ಗೆಯಿಂದ ಸಂಜೆಯವರೆಗೆ ಕುಳಿತಲ್ಲಿಂದ ಅಲ್ಲಾಡದೆ ದಿನದ ವ್ಯಾಪಾರ ವಹಿವಾಟವನ್ನು

ನೋಡುತ್ತಿದ್ದನು. ಉಮೇಶನು ಆಗಾಗ್ಗೆ ಹೋಟೇಲಿನಿಂದ ಚಹ ಮತ್ತು ತಿಂಡಿ ತರಿಸಿ ತಿನ್ನುತ್ತಾ ತನ್ನ ಕೆಲಸದಲ್ಲಿಯೇ ನಿರತನಾಗಿದ್ದನು. ರಮೇಶನು ತನ್ನ ಎದುರಿಗೆ ಕುಳಿತುಕೊಂಡಿರುವುದಾದರೂ ಅವನಲ್ಲಿ ಊಟ ಮಾಡಿದಿಯೋ ಅಥವಾ ಚಹಾ ಕುಡಿಯುತ್ತಿಯೋ ಎಂದು ಕೇಳಿ ಕೂಡಾ ನೋಡಲಿಲ್ಲ. ರಮೇಶನೂ ಯಾವ ಇಚ್ಛೆಯನ್ನೂ ಪ್ರಕಟಿಸಲಿಲ್ಲ. ಆದರೆ ಅವನ ವಿಚಾರವೇ ಬೇರೆ ದಿಕ್ಕಿಗೆ ಹರಿದಿತ್ತು. ಈ ಯುದ್ಧಕಾಲದಲ್ಲಿಯ ಕಳೆದ ನಾಲ್ಕೈದು ವರುಷಗಳಲ್ಲಿ ಜನರ ನೈತಿಕ ಜೀವನದಲ್ಲಿ ಮತ್ತು ಜೀವನ ಮಟ್ಟದಲ್ಲಿ ಎಷ್ಟೊಂದು ರೀತಿಯ ತಾರತಮ್ಯವಾಗಿರುವುದೆಂಬುದನ್ನೇ ಅವನು ಆಲೋಚಿಸುತ್ತಲಿದ್ದ. ಅದು ಕೂಡಾ ಸಂ॥ 1942ನೇ ಇಸವಿಯ ನಂತರ ಹೆಚ್ಚಿಗೆಯಾಗಿ ನಡೆದಿರಬೇಕೆಂದು ಊಹಿಸುವವನಾದನು. ಈ ಅವಧಿಯಲ್ಲಿ ಅವನು ಹೆಚ್ಚಿನ ಸಮಯವನ್ನು ಕಾರಾಗೃಹದಲ್ಲಿ ಕಳೆದುದರಿಂದ ಹೊರಗಿನ ಅನುಭವವು ಕಡಮೆಯಾಗಿರುವುದು ಸಹಜ. ಈ ಮೊದಲು ಅಂಗಡಿಯ ಪ್ರತಿಯೊಂದು ವ್ಯಾಪಾರ ವಹಿವಾಟನಲ್ಲೂ ಸ್ವಲ್ಪವಾದರೂ ಸಾಲ ಹೋಗುತ್ತಲಿತ್ತು. ಬಡವರು ಹೇಗೂ ಕಡ ಬೇಡುತ್ತಾರೆ. ಹಣವಂತರು ಕೂಡಾ ನಾಳೆ ಹಣವನ್ನು ಕಳುಹಿಸಿಕೊಡುತ್ತೇವೆಂದು ಸಾಲವಾಗಿ ಅಕ್ಕಿಜೀನಸನ್ನು ಕೊಂಡೊಯ್ಯುತ್ತಿದ್ದರು. ಇಂದು ಅಂಥಾ ಪರಿಸ್ಥಿತಿ ಉಳಿದಿಲ್ಲ. ಹಣದ ಉಬ್ಬರದಿಂದಾಗಿ ಪ್ರತಿಯೊಬ್ಬರ ಕೈಯೊಳಗೂ ಹಣ ಓಡಾಡುತ್ತಲಿದೆ. ಅಕ್ಕಿಜೀನಸುಗಳಿಗಿಂತಲೂ ಹಣವೇ ಅಗ್ಗವಾಗಿದೆ. ಅಲ್ಲದೆ ಸಾಲ ಬೇಡುವವರೇ ಇದ್ದಿಲ್ಲ! ಎಲ್ಲರೂ ಹಣವನ್ನು ನಗದಿ ಕೊಟ್ಟು ಸಾಮಾನುಗಳ ಯೋಗ್ಯತೆ ಗುಣ ಅವಗುಣಗಳನ್ನು ಹೇಳುತ್ತಿದ್ದರು. ಅವನ್ನೆಲ್ಲಾ ನೋಡಿಕೊಂಡೇ ರಮೇಶನು ಸಂಜೆಗೆ ಮನೆಗೆ ಹಿಂತಿರುಗಿದನು. ಆಗ್ಗೆ ಅವನ ಮನಸ್ಸಿನಲ್ಲಿ ಉಮೇಶನು ತನ್ನನ್ನು ಅಪಮಾನಗೊಳಿಸಿದನೆಂದಾಗಲೀ ಅಥವಾ ತಾನಾಗಿ ಅಂಗಡಿಗೆ ಹೋಗಿ ತಪ್ಪು ಮಾಡಿದೆನೆಂಬ ಬೇಸರವಾಗಲೀ ಇರಲಿಲ್ಲವೆಂಬಂತೆ ಸಂಜೆಯ ನೇಸರು ಮುಖದ ಮೇಲೆ ಬಿದ್ದು ನಲಿಯುತ್ತಲಿತ್ತು. ಅವನು ಮನೆಯ ಅಂಗಳಕ್ಕೆ ಕಾಲಿಡುತ್ತಿದ್ದಾಗಲೆ ರಾಮಿ ನಗುತ್ತಾ ಅವನ ಎದುರಿಗೆ ಹಾದು ಹೋಗುವವಳನ್ನು ರಮೇಶನು ಕರೆದು ನಿಲ್ಲಿಸಿದನು. ಮೊದಲಿಗೆ ಅವನಿಗೆ ಅವಳ ಪರಿಚಯವಾಗಲಿಲ್ಲ. ತನ್ನ ಮನೆಯಿಂದ ತುಂಬಿದ ಬಸುರಿಯೊಬ್ಬಳು ಬರುತ್ತಿರುವವಳಾರೆಂಬುದಾಗಿ ತಿಳಿಯುವ ಆತುರವೇ ಅವನು ಅವಳನ್ನು

ಕರೆದು ನಿಲ್ಲಿಸುವಂತೆ ಮಾಡಿತ್ತು. ರಮೇಶನು ಅವಳ ಗುರುತು ಹತ್ತಿ ಸ್ವಲ್ಪ ಹಿಗ್ಗಿದನು.

"ಏನು ಕ್ಷೇಮವೇ? ಹೆಣ್ಣಿಗೆ ತಾಯಿಯಾಗುವುದಕ್ಕಿಂತ ದೊಡ್ಡ ಸೌಭಾಗ್ಯ ಬೇರೊಂದಿಲ್ಲ. ನಿನ್ನ ಮದುವೆಯಾದುದು ನನಗೆ ಗೊತ್ತೇ ಇಲ್ಲ. ಎಲ್ಲಿಯವರು ನಿನ್ನ ಯಜಮಾನರು? ನಮ್ಮ ಪಟ್ಟಣದವರೋ ಅಥವಾ ದೂರದವರೋ?" ಎಂದು ವಾತ್ಸಲ್ಯ ದಿಂದ ಕೇಳಿದನು. ಇಷ್ಟರಲ್ಲಿ ರಾಮಿಯ ಮುಖ ಕಂದಿಹೋಗಿತ್ತು. ಅವಳು ತಲೆತಗ್ಗಿಸಿ, ನಿಟ್ಟುಸಿರಿಟ್ಟು, ಸ್ವಲ್ಪ ತಡೆದು,

"ಎಲ್ಲಿಯ ಮದುವೆ! ಅವರೇ ಇದ್ದಾರೆ. ಅವರ ಕೈಯಿಂದ ನನ್ನನ್ನು ಬಿಡಿಸಿಕೊಂಡು ಹೋಗಲು ಯಾರು ಮುಂದೆ ಬರುವವರಿದ್ದಾರೆ. ತಿಳಿದೇ ಆಗಲಿ, ತಿಳಿಯದೇ ಆಗಲಿ ಒಮ್ಮೆ ಅವರನ್ನು ಸೇರಿ ಹೋಗಿದೆ. ಇನ್ನು ಒಳಿತು ಕೆಡುಕಿಗೆಲ್ಲಾ ಅವರೇ ಗತಿ" ಎಂದು ಹೇಳಿದಳು.

"ಅವರು ಅಂದರೆ ಯಾರು!! ನಮ್ಮ ಉಮೇಶನೋ?"

"ಅವರಲ್ಲದೆ ಬೇರೆ ಯಾರು?" ಎಂದು ರಾಮಿ ಸೆರಗಿನಿಂದ ಮುಖ ಒರಸಿಕೊಂಡಳು. ರಮೇಶನು ಅವಳನ್ನು 'ಹೋಗು' ಎಂದು ಕಳುಹಿಸಿಕೊಟ್ಟ ನಾದರೂ ಮನೆಯೊಳಗೆ ಹೋಗಲಿದ್ದ ಹತ್ತು ಹೆಜ್ಜೆ ದಾರಿಯನ್ನು ಹತ್ತು ನಿಮಿಷ ಕಳೆದರೂ ನಡೆದು ಮುಗಿಸಲಾರದಾದನು. ರಾಮಿಯ ದೃಷ್ಟಿಯಲ್ಲಿ ಉಮೇಶನ ಸ್ಥಾನಮಾನವು ಎಷ್ಟು ಪವಿತ್ರವಾಗಿರುವುದೆಂದು ಅವನು ತಿಳಿದಾಗ ಪುರುಷನು ಏಕೆ ಸ್ತ್ರೀಯನ್ನು ಅದೇ ದೃಷ್ಟಿಯಲ್ಲಿ ನೋಡುತ್ತಿರುವುದಿಲ್ಲ ಎಂಬುದನ್ನು ತಿಳಿಯ ದಾದ. ಉಮೇಶನು ಕಡೆಗೂ ತನ್ನ ಹಟವನ್ನು ಬಿಡಲಿಲ್ಲ. ಆದರೂ ಈ ಹೆಣ್ಣು ಮಗಳು ತನ್ನನ್ನು ಅವನಿಗೆ ಹೊಂದಿಸಿಕೊಂಡು ಬದುಕು ಮಾಡುತ್ತಿರು ವಳು. ಈಗ ರಮೇಶನು ತನ್ನನ್ನೆ ಉಮೇಶನ ವ್ಯವಹಾರದೊಡನೆ ಹೋಲಿಸಿ ನೋಡಿದನು. ಜೀವಕ್ಕೆ ಜೀವ ಕೊಡುವ ಹೆಣ್ಣಿನ ಎದೆಯ ಮರುಕವನ್ನು ತಿಳಿಯದವನು ಇನ್ನೊಬ್ಬರ ಮನಸ್ಸಿನ ವಿಚಾರವನ್ನು ಹೇಗೆ ತಿಳಿಯ ಬಲ್ಲನು?

ಮರುದಿನ ಗೋಪಾಲನು ಪುಸ್ತಕ ಹಿಡಿದುಕೊಂಡು ಶಾಲೆಗೆ ಹೋಗಲು ಅಣಿಯಾದಾಗ ರಮೇಶನು ಅವನ ಬಳಿಗೆ ಬಂದು, 'ಒಂದು ಅಂಚೆ ಲಕ್ಕೋಟೆ ಯನ್ನು ತಾ' ಎಂದಂದನು. ಆದರೆ ಗೋಪಾಲನಿಗೆ ಅಂಚೆಲಕ್ಕೋಟೆಯನ್ನು ತರು

ವುದಕ್ಕೆ ಹಣವನ್ನು ಕೊಡಲಿಲ್ಲ. ಗೋಪಾಲನೂ ಅವನಲ್ಲಿ ಹಣವನ್ನು ಕೇಳ ಬೇಕೋ ಬೇಡವೋ ಎಂದು ತೂಕಾಡುವವನಾದನು. ಹಿರಿಯಣ್ಣನ ಮೇಲಿದ್ದ ಭಕ್ತಿಯು ಅವನನ್ನು ಮಾತಾಡಗೊಡಲಿಲ್ಲ ಮಾತ್ರ. ಸಂಜೆಗೆ ಶಾಲೆಯಿಂದ ಹಿಂತಿರುಗಿ ಬಂದ ಗೋಪಾಲನು ಅಂಚೆ ಲಕ್ಕೋಟೆಯನ್ನು ರಮೇಶನ ಮೇಜಿನ ಮೇಲಿಡುತ್ತಾ,

"ನಿಮ್ಮ ಕೈಯಲ್ಲಿ ದುಡ್ಡಿಲ್ಲವೋ" ಎಂದು ಕೇಳಿದನು. ಆ ಮಾತಿಗೆ ರಮೇಶನು ಒಮ್ಮೆ ತಲೆಯೆತ್ತಿ ನೋಡಿ, ಅದೇ ದೃಷ್ಟಿಯನ್ನು ಕಿಟಕಿಯ ಮುಖೇನ ಹೊರಗೆ ಸರಿಸಿ, ನಿಟ್ಟುಸಿರಿಟ್ಟು,

"ನಿನಗೆ ನಾನು ಈ ಲಕ್ಕೋಟೆಯನ್ನು ತರುವುದಕ್ಕೆ ದುಡ್ಡು ಕೊಟ್ಟಿಲ್ಲ, ಅಲ್ಲವೇ? ಹೌದು, ನಾನು ನಿನಗೆ ದುಡ್ಡು ಕೊಟ್ಟಿಲ್ಲ. ಕೊಡುತ್ತೇನೋ ಎಂದೂ ಗೊತ್ತಿಲ್ಲ. ನಿನ್ನ ಋಣದಲ್ಲಿಯೂ ಬೀಳುತ್ತಾ ಇದ್ದೇನೆ. ಯಾರಿಗೆ ಗೊತ್ತು ಮುಂದಿನ ಕಥೆ ಏನಾಗುತ್ತದೆಂದು. ನಿನಗೆ ನಾನು ಏನನ್ನೂ ಕೊಟ್ಟಿರಲಿಲ್ಲ. ಏನನ್ನಾದರೂ ಕೊಡುತ್ತೇನೋ ಎಂದು ಗೊತ್ತಿಲ್ಲ" ಎಂದನ್ನು ತ್ತಿದ್ದಾಗ್ಗೆ ಗೋಪಾಲನು ಮಧ್ಯದಲ್ಲಿ ಬಾಯಿಹಾಕಿ,

"ನಿಮಗೆ ಮೈಯಲ್ಲಿ ಹುಷಾರಿಲ್ಲವೋ ಏಕೆ ಹೀಗೆ ಮಾತಾಡುತ್ತಿ ರುವುದು" ಎಂದು ಕೇಳಿದನು.

"ಹೆದರಬೇಡ, ಹುಷಾರಿದ್ದೇನೆ; ಈಗಲೂ ಎಲ್ಲವನ್ನೂ ತಿಳಿಯು ತ್ತಿದ್ದೇನೆ. ನೋಡು, ಇಂದಿನವರೆಗೆ ನಾನು ನಿನಗೆ ಏನನ್ನೂ ಕೊಟ್ಟಿರಲಿಲ್ಲ. ಈಗಲೂ ಕೊಡುವುದಕ್ಕೆ ನನ್ನ ಕೈಯಲ್ಲಿ ಅಂಥ ದ್ದೇನೂ ಇಲ್ಲ ನನ್ನದೆಂಬುದು ಏನಾದರೂ ಇರುವುದಾದರೆ ಅವು ಈ ಕಪಾಟನೊಳಗಿರುವ ಹತ್ತು ಪುಸ್ತಕಗಳು. ಅವೆಲ್ಲ ನಿನಗಾಗಿ ಮತ್ತು ನಿನ್ನಂತೆ ಓದುವವರಿಗಾಗಿ. ದುಡ್ಡು ಕಾಸು ಕೊಡಲು ನನ್ನ ಕೈಯಲ್ಲಿಲ್ಲ. ದುಡ್ಡು ಕಾಸನ್ನು ಆಶಿಸುವವರು ಬಹಳ ಜನರಿದ್ದಾರೆ. ದುಡ್ಡನ್ನು ಒಬ್ಬರಿಂದ ಇನ್ನೊಬ್ಬರು ಕಸಿದು ಕೊಳ್ಳಲು ಸಾಧ್ಯವಿದೆ. ಈ ಪುಸ್ತಕದಲ್ಲಿರುವುದನ್ನು ನೀನು ಓದಿ ಮನವರಿಕೆ ಮಾಡಿಕೊಂಡರೆ ಅದನ್ನು ನಿನ್ನಿಂದ ಕಸಿದು ಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ನೀನೇ ಜನಸಾಮಾನ್ಯರ

ಪ್ರಯೋಜನಾರ್ಥವಾಗಿ ಬಹಿರಂಗ ಪಡಿಸಬೇಕಾದೀತು" ಎಂದನ್ನು ತ್ತಿದ್ದಾಗಲೆ ಗೋಪಾಲ ಅವನ ಮಾತಿನ ಅರ್ಥವಾಗದೆ ತಲೆತುರಿಸುತ್ತಾ ಹೊರಗೆ ಹೊರಟು ಹೋದನು. ಅವನು ಹೋಗುತ್ತಿರುವುದನ್ನು ನೋಡಿ ರಮೇಶನು ಮುಗುಳು ನಕ್ಕನು!

ಈ ಮಾತು ನಡೆದೂ ಕೆಲವು ದಿನಗಳ ವರೆಗೆ ರಮೇಶನೂ ಮನೆಯಿಂದ ಹೊರಬೀಳಲಿಲ್ಲ. ಏಳನೇ ದಿನ ಗೋಪಾಲನನ್ನು ಕರೆದು, 'ಈ ಕಾಗದವನ್ನು ಅಂಚೆಯಲ್ಲಿ ಹಾಕಿಬಿಡು' ಎಂದು ಅದೇ ಲಕ್ಕೋಟೆಯನ್ನು ಅವನ ಕೈಯಲ್ಲಿ ಕೊಟ್ಟನು. ಲಕ್ಕೋಟೆಯನ್ನು ಕೈಗೆ ತೆಗೆದುಕೊಂಡು ಗೋಪಾಲನು ಒಮ್ಮೆ ಆದನ್ನು ತಿರುಗಿಸಿ ನೋಡಿದನು. ಅಷ್ಟರಲ್ಲಿ ರಮೇಶನು ಅಲ್ಲಿಂದ ಹಿಂತಿರುಗಿದ್ದ. ಲಕ್ಕೋಟೆಯನ್ನು ಮುಚ್ಚಿರದಿದ್ದರಿಂದ ಗೋಪಾಲನ ಮನಸ್ಸಿನಲ್ಲಿ ಸಂಶಯ ಹುಟ್ಟುವಂತಾಯಿತು. ಅದನ್ನು ಮುಚ್ಚಬೇಕೋ ಬೇಡವೋ ಎಂದು ಊಹಿಸುತ್ತಾ ಒಳಗಿದ್ದ ಕಾಗದವನ್ನು ಹೊರಗೆ ತೆಗೆದು ಓದಲಾರಂಭಿಸಿದನು. ಅದು ತುಳಸಿಗೆ ಬರೆದುದಾಗಿತ್ತು. ತನ್ನ ಪ್ರೀತಿಯ ಅತ್ತಿಗೆಯ ನೆನಪಾದಾಗ ಗೋಪಾಲನ ಬಾಯಿಯಲ್ಲಿ ನೀರೂರಿ ಬಂತು. ತುಳಸಿ ಎಂದೂ ಅವನಿಗೆ ಬಿರುನುಡಿ ದವಳಲ್ಲ. ಕೆಟ್ಟಮಾತನ್ನು ಹೇಳಿದವಳಲ್ಲ. ಅವಳು ಮನೆಯಲ್ಲಿರುವಾಗ್ಗೆ ಶಾಲೆಗೆ ಹೋಗುವ ಮಕ್ಕಳಿಗೆ ಯಾವಾಗಲೂ ಹೊಟ್ಟೆ ತುಂಬ ತಿಂಡಿ ತಿನಸು ಗಳು ಒದಗುತ್ತಿದ್ದವು. ಆದರೆ ಆ ದಿನ ಇಂದು ಉಳಿದಿಲ್ಲ. ತುಳಸಿಯು ತವರು ಮನೆಗೆ ಹೋಗಿರುವಳು. ಇನ್ನು ಯಾವಾಗ್ಗೆ ಹಿಂತಿರುಗಿ ಬರುತ್ತಾಳೋ ಎಂದೆನ್ನುತ್ತಾ ಆ ಕಾಗದವನ್ನು ಭಕ್ತಿಯಿಂದ ಓದಿದನು.

ಸೌ|| ತುಳಸಿಗೆ,

ಮೂಲ್ಕಿಗೆ ಹೊರಟಿರುವ ನೀನು ಸುರಕ್ಷಿತವಾಗಿ ನಿನ್ನ ಮನೆಗೆ ಮುಟ್ಟಿರ ಬಹುದೆಂದು ತಿಳಿಯುತ್ತೇನೆ. ಅದನ್ನೆ ನಾನು ಆಶಿಸುತ್ತೇನೆ. ನೀನು ಇಲ್ಲಿಂದ ಹೋದಂದಿನಿಂದ ನಾನು ಬಹಳವಾಗಿ ಆಲೋಚಿಸಿ ನೋಡುವವನಾದೆ. ಆದರೆ ನನ್ನ ಕಾಲಿನಲ್ಲಿ ನಾನು ನಿಲ್ಲುವ ಸಮಯವು ಇಂದಿಗೂ ಬಂದಿಲ್ಲವೆಂದು ತಿಳಿಯು ತ್ತಿದ್ದೇನೆ. ಪ್ರತಿ ವಿಷಯದಲ್ಲಿಯೂ ನಿನ್ನ ವಿಚಾರವೇ ಗೆಲ್ಲುವಂತೆ ತೋರುತ್ತಿದೆ. ಸೋಲು ನನ್ನನ್ನು ಬಂಧಿಸಿದೆ. ಸೋಲುವೆನೆಂಬ ಭೀತಿ ಎದೆಯಲ್ಲಿ ಹುಟ್ಟುವಂ ತಿಲ್ಲದಿದ್ದರೂ ಸೋತೆನೆಂಬುದಾಗಿ ತಿಳಿಯುತ್ತಿದ್ದೇನೆ. ಇನ್ನು ಮುಂದಕ್ಕೆ ನೀನು ಹೇಳಿದಂತೆ ನಡೆಯುತ್ತೇನೆ. ನನ್ನ ವಿಚಾರವನ್ನು ನಿನಗಾಗಿ ಮೀಸಲಾಗಿಡುತ್ತೇನೆ.

ಬೇಗನೇ ನಿನ್ನಲ್ಲಿಗೆ ಬರುತ್ತೇನೆ. ತಪ್ಪು ಒಪ್ಪಿಕೊಂಡಲ್ಲಿ ಮನುಷ್ಯ ಸಣ್ಣವನಾಗುವುದಿಲ್ಲ. ಸೋತು ನಿನ್ನಲ್ಲಿಗೆ ಬರುತ್ತಿರುವ ನನ್ನನ್ನು ನೀನು ನೋಯಿಸಲಾರೆಯೆಂದು ತಿಳಿಯುತ್ತೇನೆ. ನಿನಗೆ ಮತ್ತು ಮಕ್ಕಳಿಗೆ ಆಶೀರ್ವಾದ.

ಇತೀ

ನಿನ್ನ

ರಮೇಶ.

ಆ ಕಾಗದವನ್ನು ಓದಿ ಗೋಪಾಲನು ಸ್ವಲ್ಪ ಹೊತ್ತಿನವರೆಗೆ ಆಲೋಚಿಸುವವನಾದ. ಆದರೆ ಅವನಿಗೆ ಆ ಕಾಗದದಲ್ಲಿ ಏನೊಂದೂ ವಿಶೇಷತೆಯು ತೋರಿಬರಲಿಲ್ಲ. ಅಂಥದ್ದೇನೂ ಹೊಸತೂ ಕಾಣಲಿಲ್ಲ. ಲಕ್ಕೋಟೆಯ ಬಾಯಿ ಮುಚ್ಚಿ ಅಂಚೆಗೆ ಹಾಕಲು ಕೊಂಡುಹೋದನು.

ಮೂರನೇ ದಿನ ರಮೇಶನು ಹಾಸಿಗೆ ಬಿಟ್ಟು ಹೊರಗೆ ಬಂದಾಗ ಹೊತ್ತು ಮೇಲೇರಿ ಬಂದಿತ್ತು. ಬೆಳಗ್ಗಿನ ವಿಧಿಗಳನ್ನು ಮುಗಿಸಿಕೊಂಡು ಬಂದವನು ತನ್ನ ಕೋಣೆಗೆ ಹೋಗಿ ಸ್ವಲ್ಪ ಹೊತ್ತು ಕುಳಿತುಕೊಂಡನು. ಆಗ್ಗೆ ಸೀತಕ್ಕ ಅವನನ್ನು ಬೆಳಗ್ಗಿನ ಚಹಕ್ಕೆ ಕರೆದಳು. ಕೋಣೆಯಿಂದ ಹೊರಗೆ ಬರುತ್ತಿದ್ದಂತೆಯೇ ಒಮ್ಮೆಗೆ ತಡೆದು ನಿಂತಂತಾದನು. ಎದುರಿಗೆ ಅವನು ಮದುವೆಯಾದಾಗ್ಗೆ ತೆಗೆಸಿದ 'ಫೊಟೊ' ಗೋಡೆಯಲ್ಲಿ ತೂಗುತ್ತಿತ್ತು. ರಮೇಶನು ಅದನ್ನು ಎರಡು ನಿಮಿಷ ಕಣ್ಣುಬಿಟ್ಟು ನೋಡಿದನು. ಬಹಳ ದಿನಗಳಿಂದ ಕೂಡಿಕೊಂಡು ಬಂದಿದ್ದ ಈ ಕೋಣೆ ಮತ್ತು ಸಾಮಾನುಗಳೊಡನೆ ಇದ್ದ ಸಂಬಂಧವನ್ನು ತೊರೆದು ಅವನು ಇಂದು ಬದುಕಿನಲ್ಲಿ ತನ್ನ ವಿಚಾರದಂತೆ ನಡೆಯಲು ಸಾಧ್ಯವಾಗದೆ ಸೋತು ಹೆಂಡತಿಯ ಬಳಿಗೆ ಹೋಗಲು ನಿರ್ಧರಿಸಿದ್ದಾನೆ. ಹೀಗೇಕೆ ಆಗುವಂತಾಯಿತು ಎಂಬುದನ್ನು ತಿಳಿಯಲೂ ಅವನು ಮುಂದಾಗಲಿಲ್ಲ. ಮನುಷ್ಯನು ಎಷ್ಟು ಸಬಲನಾಗಿದ್ದರೂ ಏನಾದರೊಂದು ದೋಷವು ಅವನಲ್ಲಿ ಎದ್ದು ಕಾಣುತ್ತದೆ. ಚಹಫಲಾಹಾರಕ್ಕೆ ಕುಳಿತಿದ್ದ ರಮೇಶನು ಏನನ್ನು ತಿಂದನೋ ಏನನ್ನು ಕುಡಿದನೋ ಬಹಳ ಹೊತ್ತು ಅಲ್ಲಿಯೇ ಕುಳಿತಿದ್ದು ಕಡೆಗೆ ಎದ್ದು ಹೊರಗೆ ಬಂದನು. ಈಗ ಅವನಿಗೆ ಎಲ್ಲಿಗೆ ಹೋಗಿ ಏನು ಮಾಡಬೇಕೆಂದು ತಿಳಿಯಲಿಲ್ಲ. ದಾರಿಯಲ್ಲಿ ಹೋಗುತ್ತಾ ಸ್ವಲ್ಪ ತಡೆದು ನಿಂತು ಮತ್ತೆ ನೇರವಾಗಿ ಅಂಗಡಿಯ ಕಡೆಗೆ ನಡೆದನು.

ಹೊತ್ತು ಮೇಲೇರುತ್ತಾ ಬಿಸಿಲು ಪ್ರಖರವಾಗುತ್ತಲಿತ್ತು. ದಾರಿಯಲ್ಲಿ

ನೋಡಲು ಸಿಕ್ಕಿದ ಶಾಲಾಮಕ್ಕಳನ್ನು ಕಂಡು ರಮೇಶನು ಮುಗುಳು ನಕ್ಕನು. ಹೆತ್ತವರು ಎಲ್ಲಿಂದ, ಹೇಗೆ ಗಳಿಸಿತಂದು ಹೊಟ್ಟೆಗೆ ಹಾಕುತ್ತಾರೆ ಎಂಬುದನ್ನು ತಿಳಿಯದೆ ಓದುವ, ಆಡುವ ಸುಖದ ಸಮಯವಿದು. ಯಾರಿಗೆ ಗೊತ್ತು ಇದೇ ಶಾಲಾಮಕ್ಕಳು ಮುಂದಕ್ಕೆ ಏನಾಗಬಲ್ಲರು ಎಂದು! ಅಂಗಡಿಯ ಮೆಟ್ಟಲು ಹತ್ತಿ ರಮೇಶನು ಸ್ವಲ್ಪ ಹೊತ್ತು ಕುಳಿತುಕೊಂಡನು. ಉಮೇಶನು ಈಗಲೂ ಬಾಯ್ಬಿಟ್ಟು ತನ್ನ ಹಿರಿಯಣ್ಣನೊಡನೆ ಮಾತಾಡಲಿಲ್ಲ. ತಾನು ಮೂಲ್ಕಿಗೆ ಹೋಗುವುದನ್ನು ಹೇಳಬೇಕೆಂದು ರಮೇಶನು ಮುಂದಾದರೂ ಉಮೇಶನ ಉರಿಯುತ್ತಿರುವ ಮುಖವನ್ನು ಕಂಡು ಬಾಯಿ ಬಿಗಿದುಕೊಂಡನು. ಕಡೆಗೆ ಮೆಲ್ಲನೆ ಅಂಗಡಿಯಿಂದ ಇಳಿದು ಬಂದನು. ಈಗಲೂ ಅವನ ಮನಸ್ಸು ವಿಚಾರ ವಿನಿಮಯಕ್ಕೂ ಒಡಂಬಡಲಿಲ್ಲ. ಹಿಂತಿರುಗಿ ಮತ್ತೊಮ್ಮೆ ಅಂಗಡಿಯ ಕಡೆಗೆ ನೋಡಿ ಮೆಲ್ಲನೆ ಮುಂದಕ್ಕೆ ಹೋದನು. ಮಳೆಗಾಲ ಆರಂಭವಾಗುವ ಮೊದಲು ಆಕಾಶದಲ್ಲಿ ಮೋಡಗಳು ತುಂಬಿ ಅತ್ತಿಂದಿತ್ತ ಅಲೆದಾಡುತ್ತಿರುವಂತೆ ರಮೇಶನ ತಲೆಯೊಳಗೂ ವಿಚಾರಗಳು ತುಂಬಿ ಗುರಿಕಾಣದೆ ಹೊಯ್ದಾಡುತ್ತಿದ್ದವು. ತುಂಬಾ ನಡೆದಾದ ಮೇಲೆ ಅವನು ತಲೆಯೆತ್ತಿ ನೋಡಿದಾಗ, ಈ ಮೊದಲು ನೌಕರಿ ಮಾಡುತ್ತಿದ್ದ ಪತ್ರಿಕಾ ಕಚೇರಿಯ ಕೆಳಗೆ ಬಂದು ನಿಂತಿದ್ದನು. ರಮೇಶನು ಇಲ್ಲಿ ನೌಕರಿ ಮಾಡಲು ಇಚ್ಛಿಸುವುದಾದರೆ, ಈಗಲೂ ಅವನಿಗೆ ಬಾಗಿಲು ತೆರೆದಿಟ್ಟದೆ. ಆದರೆ ಮಾನಸಿಕ ವಿಚಾರವನ್ನು ತೊರೆದು ಬರೇ ಹೊಟ್ಟೆ ತುಂಬಿಸುವುದಕ್ಕಾಗಿ ದುಡಿಯುವ ತತ್ವವು ಅವನಿಗೆ ಸರಿ ಬೀಳು ತ್ತಿದ್ದಿಲ್ಲ. ಅದನ್ನೇ ಸಮರ್ಥಿಸುತ್ತಾ ಅವನು ಮೋಟಾರು ಬಸ್ಸು ನಿಲ್ದಾಣದ ಕಡೆಗೆ ನಡೆದನು. ಅಲ್ಲಿಗೆ ಹೋಗಿ, ಟಿಕೇಟು ಪಡೆಯುವುದಕ್ಕಾಗಿ ಹಣ ತೆಗೆ ಯಲು ಅಂಗಿಕಿಸೆಗೆ ಕೈಹಾಕಿದಾಗ ನಾಲ್ಕಾಣೆ ಪಾವಲಿ ಮತ್ತು ಮೂರು ಬಿಲ್ಲಿ ಗಳು ಮಾತ್ರ ಹೊರಬಂದವು. ಇದನ್ನು ನೋಡಿ ಅವನ ಮನಸ್ಸಿನಲ್ಲಿ ಹಿಡಿಸ ಲಾರದಷ್ಟು ನೋವಾಯಿತು. ಮನೆಯಿಂದ ಹೊರಡುವ ಮೊದಲೇ ದಾರಿ ಖರ್ಚಿಗೆ ಬೇಕಾಗುವಷ್ಟು ಹಣವನ್ನು ತಾಯಿಯಿಂದಲಾದರೂ ಬೇಡಿ ಪಡೆದು ಕೊಳ್ಳಬೇಕಿತ್ತು. ಅದನ್ನು ಅವನು ಮರೆತಿದ್ದನು. ಅದಕ್ಕಾಗಿ ಈಗ ಅವನು ಮರುಗಿದನು. ಈಗ ಅವನಿಗೆ ಪ್ರಾಣಸಂಕಟವಾದಂತಾಯಿತು. ಹಿಂತಿರುಗಿ ಮನೆಗೆ ಹೋಗಿ ಹಣ ತರುವುದೊಂದೇ ಸದುಪಾಯವು ಒಡೆದು ಕಾಣುತ್ತಲಿತ್ತು. ಆದರೆ ಹಾಗೆ ಮಾಡುವುದಕ್ಕೂ ಅವನ ಮನಸ್ಸು ಒಡಂಬಡಲಿಲ್ಲ. ಅಲ್ಲಿ

ತಾಯಿಯು ಹಲವು ಪ್ರಶ್ನೆಗಳನ್ನು ಹಾಕಿ ಮೂಲ್ಕಿಗೆ ಹೋಗಬೇಡವೆಂದು ಹೇಳಿದರೆ! ಅವನ್ನೆಲ್ಲಾ ಆಲೋಚಿಸುತ್ತಾ 18 ಮೈಲು ರಸ್ತೆಯನ್ನು ನಡೆದು ಮುಗಿಸಬಾರದೇ ಎಂದುಕೊಂಡು ಮುಂದೆ ಸಾಗಿದನು.

ಕೂಳೂರಿನ ಕಡವಿಗೆ ಬಂದು ಮುಟ್ಟುವಾಗ್ಗೆ ವೈದಣಿದು ರಮೇಶನ ಹೊಟ್ಟೆ ಹಸಿದಿತ್ತು. ಹದಿನೆಂಟು ಮೈಲು ದಾರಿಯನ್ನು ನಡೆಯಬಲ್ಲೆನೆಂಬ ಹಟ ಮುರಿದು ಐದು ಮೈಲಲ್ಲೆ ನೆಲಕ್ಕೆ ಬೀಳುವಂತಾಯಿತು. ಕಾಲುಗಳು ನೋಯತೊಡಗಿದುವು. ಮಧ್ಯಪ್ರಾಯದ ಸಾಮಾನ್ಯ ತರುಣನೊಬ್ಬನು ಹದಿನೆಂಟು ಮೈಲು ದಾರಿಯನ್ನು ನಡೆಯುವೆನೆಂದು ಹೊರಡುವುದು ವಿಶೇಷ ವಲ್ಲ. ಈ ಮೊದಲು ಮನೆಯೊಳಗೆ ನಡೆದುಹೋದ ಘಟನೆಯು ರಮೇಶ ನನ್ನು ಕುಗ್ಗಿಸಿರುವುದೇ ವಿಶೇಷವು. ಕಡವಿನ ಬಳಿಯಲ್ಲಿರುವ ಅಂಗಡಿಯಿಂದ ಒಂದು ಸೀಯಾಳ ಮತ್ತು ಎರಡು ಬಾಳೆಹಣ್ಣುಗಳನ್ನು ಕೊಂಡುಕೊಂಡು ತಿಂದು ದಣಿವು ನೀಗಿಸಿದನು. ಅಲ್ಲಿ ಸ್ವಲ್ಪ ಹೊತ್ತು ಕುಳಿತಾಗ್ಗೆ ಕಾಲುಗಳು ನೋಯತೊಡಗಿದವು. ಹಿಂತಿರುಗಿ ಮನೆಗೆ ಹೋಗುವುದೇ ಲೇಸೆಂಬ ವಿಚಾರವು ಆರಂಭದಲ್ಲಿ ಹುಟ್ಟಿತಾದರೂ ಮನಸ್ಸಿನ ದೃಢತೆಯು ಸ್ವಲ್ಪವೂ ಕದಲಲಿಲ್ಲ. ಅದಕ್ಕೆ ಸೀಯಾಳದ ತಂಪು ಅಷ್ಟೇ ಸಹಕಾರಿಯಾಯಿತು. ರಮೇಶನು ದೋಣಿಯಲ್ಲಿ ಕುಳಿತು ಹೊಳೆ ದಾಟುತ್ತಿದ್ದಾಗ ಮೇಲೆ ನೋಡಿದನು. ಹೊತ್ತು ತಲೆಯ ಮೇಲೆ ಸುಡುತ್ತಲಿತ್ತು. ಬಿಸಿಲು ನದಿಯ ನೀರಿನ ಅಲೆ ಗಳ ಮೇಲೆ ನಲಿಯುತ್ತಲಿತ್ತು. ಇನ್ನೂ ಹದಿನೆರಡು ಹದಿಮೂರು ಮೈಲು ದಾರಿ ನಡೆಯಲಿದ್ದುದರಿಂದ ಕುಳಿತು ವಿಶ್ರಮಿಸಿಕೊಳ್ಳುವಷ್ಟು ಸಾವಕಾಶವು ಇದ್ದಿರಲಿಲ್ಲ. ಅದೇ ಉರಿಬಿಸಿಲಿಗೆ ಮಾರ್ಗದ ಬದಿಯಲ್ಲಿ ಮರದ ನೆರಳು ನೋಡಿಕೊಂಡು ರಮೇಶನು ಮುಂದಕ್ಕೆ ನಡೆದನು.

ಪಾವಂಜೆ ಕಡವು ಇನ್ನೂ ಸುಮಾರು ದೂರ ಉಳಿದಿರುವಾಗಲೆ ಹೊತ್ತು ಮುಳುಗಿತು. ನೋಡುನೋಡುವಷ್ಟರಲ್ಲಿಯೇ ಕತ್ತಲು ಕವಿ ಯುತ್ತಾ ಬಂತು. ರಮೇಶನಿಗೆ ಏನುಮಾಡಬೇಕೆಂದು ಆಲೋಚಿಸಲು ಹೊತ್ತು ಇರಲಿಲ್ಲ. ದಾರಿ ನಡೆದು ಕಾಲುಗಳು ಸವೆದಿರುವುದರಿಂದ ಒಂದು ಹೆಜ್ಜೆ ಮುಂದಿಡುವುದೂ ಕಷ್ಟವಾಗುತ್ತಾ ಬಂದಿತು. ಬಾಯಾರಿಕೆಯಿಂದ ಗಂಟಲು ಒಣಗಿ ಎದೆ ಹಾರಿತ್ತು. ಕಣ್ಣುಗಳು ಬಾಡಿ ಒಳಸೇರಿದ್ದವು. ಮುಖ ಬೂದಿ ಮುಚ್ಚಿತ್ತು. ಆಗ ಅವನು "ಅಯ್ಯೋ ದೇವರೇ!"

ಎಂದಂದನು. ಇನ್ನೂ ಐದಾರು ಮೈಲುಗಳ ದಾರಿಯಿದೆ; ನಡೆಯಬಲ್ಲೆನೋ ಎಂದಂದುಕೊಂಡನು. ಅಷ್ಟರಲ್ಲಿ ಪಾವಂಜೆ ಕಡವು ಬಂತು. ರಮೇಶನು ಕಾಲುನೀಡಿ ಕಡವಿನ ಬಳಿಯಲ್ಲಿರುವ ಅಂಗಡಿಯ ಎದುರಿಗೆ ಕುಳಿತು ಕೊಂಡನು. ಅಂಗಿಕಿಸೆಯಲ್ಲಿ ಒಂದು ಆಣೆ ಮತ್ತು ಮೂರು ಪಾವಾಣೆ ಗಳಿದ್ದವು. ಕಡವಿನ ಅರ್ಧಾಣೆ ಕಳೆದು, ಉಳಿದ ಐದು ಪಾವಾಣೆಗೆ ಅಂಗಡಿ ಯಲ್ಲಿ ಏನು ಸಿಗಬಹುದೋ ಅವನ್ನು ಕೊಂಡುಕೊಂಡು ತಿಂದನು. ಮತ್ತು ಅಲ್ಲಿಯೇ ಬೇಡಿ ಎರಡು ಲೋಟ ನೀರು ಕುಡಿದನು. ಈಗ ಅವನ ಎದೆ ಸ್ವಲ್ಪ ತಣಿದಂತಾಯಿತು. ಆದರೆ ಕಾಲುಗಳು ಒಡೆದು, ಕಲ್ಲು ಚುಚ್ಚಿ ನೆತ್ತರು ಸುರಿಯುತ್ತಲಿತ್ತು. ಅದನ್ನು ನೋಡಿ ಮರುಗುವುದಕ್ಕಿಂತ ಹೆಚ್ಚಿನ ಬೇನೆ ಬೇಸರಿ ಕೆಯು ಮೈ ತುಂಬಿದ್ದುದರಿಂದ ಬರೇ ಹುಸಿನಕ್ಕು, 'ಹೋಗಿ ಮುಟ್ಟಬಲ್ಲೆನೋ' ಎಂದಂದುಕೊಂಡನು. ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ದೋಣಿ ನಡೆಸುವವರು ದೋಣಿಗಳನ್ನು ಗೂಟಕ್ಕೆ ಕಟ್ಟಿ ಮನೆಗೆ ಹೋಗುವವರಿದ್ದಾರೆ. ಅದೇ ಸಂದರ್ಭದಲ್ಲಿ ರಮೇಶನು ದೋಣಿಯಲ್ಲಿ ಪಾವಂಜೆ ಕಡವನ್ನು ದಾಟದನು.

ಮಧ್ಯಾಹ್ನಕ್ಕೆ ಕೂಳೂರು ಕಡವು ದಾಟುವಾಗ್ಗೆ ಇದ್ದ ಉತ್ತೇಜನವು ಈಗ ಉಳಿದಿರಲಿಲ್ಲ. ಮಧ್ಯಾಹ್ನದ ಉರಿಬಿಸಿಲಿನ ಬದಲಿಗೆ ಈಗ ಇರುಳು ದಟ್ಟವಾಗಿ ಹರಡಿತ್ತು. ಆದರೆ ಮೈಯಬೇನೆ ಬೇಸರಿಕೆಯು ಉರಿಬಿಸಿಲಿ ಗಿಂತ ಇಮ್ಮಡಿ ಚುಚ್ಚುತ್ತಲಿತ್ತು. ದೋಣಿ ಆಚೆ ದಡ ಮುಟ್ಟಿದರೂ ರಮೇ ಶನಿಂದ ಕೆಳಗಿಳಿಯಲು ಆಗಲಿಲ್ಲ! ಇದನ್ನು ನೋಡಿ ದೋಣಿಯವನು ಬಂದು, ಅವನಿಗೆ ಕೈಕೊಟ್ಟು ಎಬ್ಬಿಸಿ ನೆಲಕ್ಕೆ ಮುಟ್ಟಿಸಿದನು. ರಾತ್ರಿ ಹೆಚ್ಚುತ್ತಲಿತ್ತು. ತಾನು ಹೋಗಿ ಮುಟ್ಟುವೆನೆಂಬ ಆಶೆ ಒತ್ತೊತ್ತಿ ಬರುತ್ತ ಲಿತ್ತು. ಆಯಾಸದಣಿವಿನಿಂದ ರಮೇಶನಿಗೆ ಉಸಿರುಕಟ್ಟಿ ಎದೆ ನೋಯ ತೊಡಗಿತು. ಕಡವಿನ ಬಳಿಯಲ್ಲಿಯೇ ಮಲಗಿಬಿಡುವುದೆಂದು ಒಮ್ಮೆ ಊಹಿ ಸಿದನು. ಆದರೆ ದಾರಿನಡೆದು ಸೋತವರು ಸ್ವಲ್ಪ ವಿಶ್ರಾಂತಿ ಪಡೆದು ಕೊಂಡರೆ, ಮತ್ತೆ ಮುಂದಕ್ಕೆ ನಡೆಯಲು ಕಷ್ಟವಾಗುತ್ತದೆಂಬುದನ್ನು ತಿಳಿ ದಿದ್ದನು. ಅದನ್ನೆ ಬಗೆದು ಮುಂದಕ್ಕೆ ನಡೆದನು. ಈಗ ಅವನ ಕಾಲು ಗಳು ಸಂಪೂರ್ಣ ಸೋತುಹೋಗಿದ್ದವು. ಒಂದು ಹೆಜ್ಜೆಯನ್ನು ಮುಂದಕ್ಕೆ ಎತ್ತಿ ಇಡಲೂ ಪ್ರಯಾಸವೆನಿಸತೊಡಗಿತು. ರಾತ್ರಿ ಹೆಚ್ಚಾದುದರಿಂದ ಜನರು ದಾರಿ ನಡೆಯುತ್ತಿದ್ದಿಲ್ಲ.

ಸಾವಂಜಿ ಕಡವಿನಿಂದ ಹಳೆಯಂಗಡಿ ವರೆಗಿರುವ ಸುಮಾರು ಒಂದು ಮೈಲು ದೂರ ದಾರಿ ನಡೆಯಬೇಕಾದರೆ ಅವನಿಗೆ ಆ ಸ್ಥಿತಿಯಲ್ಲಿ ಒಂದು ವರೆ ಎರಡು ಗಂಟೆಗಳಾದರೂ ಹಿಡಿದಿರಬೇಕು. ಹಳೆಯಂಗಡಿಯ ಅಂಗಡಿ ಗಳ ಬಾಗಿಲು ಮುಚ್ಚಿದ್ದುದರಿಂದ ರಮೇಶನಿಗೆ ಯಾರೂ ಅಲ್ಲಿ ಕೂಡಾ ಮಾತಾ ಡಲು ಸಿಗಲಿಲ್ಲ. ಮೇಲಾಗಿ ಬಾಯಾರಿಕೆಯಿಂದ ನಾಲಗೆಯೂ ಎಳೆದು ಹೋದಂತಾಗಿತ್ತು. ಅಲ್ಲಿಯೇ ಅಂಗಡಿಯ ಜಗಲಿಯಲ್ಲಿ ಮಲಗಿ ಬಿಡುವು ದೆಂದು ಯೋಚಿಸಿದ. ಈಗ ಅವನಿಗೆ ತನ್ನ ಮಕ್ಕಳ ನೆನಪು ಸ್ಮೃತಿಯಲ್ಲಿ ಹರಿದು ಬಂತು. ಮಕ್ಕಳನ್ನು ನೋಡುವ ಹಂಬಲ ಹೆಚ್ಚಿತು. ನೊಡುವೆನೋ ಎಂಬ ಸಂಶಯ ಮೂಡದೆ ಇರಲಿಲ್ಲ. ಏನು ಆಗುವುದುಂಟೋ ಅದುವೇ ಆಗ ಬಹುದೆಂದು ಊಹಿಸುತ್ತಾ ನಾಳೆಯ ಆಶೆಯಿಂದ ದಾರಿಯಲ್ಲಿ ಬಳಲಲು ಇಚ್ಛಿ ಸದೆ ರಮೇಶನು ಮುಂದಕ್ಕೆ ನಡೆದನು. ಇನ್ನೂ ಸ್ವಲ್ಪ ಮುಂದಕ್ಕೆ ಹೋದಾಗ ಅವನು ನಡೆಯಲಾರದಾದ. ಎದೆಯೊಡೆದು ಬಾಯಿಯಲ್ಲಿ ನೊರೆ ಬಂತು. ತಲೆತಿರುಗಿದಂತಾಗಿ ಎಡವಿ ಬಿದ್ದುಬಿಟ್ಟನು. ಸುಮಾರು ಹೊತ್ತಿನ ಮೇಲೆ ಮೆಲ್ಲನೆ ಎದ್ದು ಕುಳಿತುಕೊಂಡನು. ಆಕಾಶ ಶುಭ್ರವಾಗಿತ್ತು! ನಕ್ಷತ್ರಗಳು ಮಿನುಗುತ್ತಿದ್ದವು! ತಂಗಾಳಿಯು ಮೆಲ್ಲನೆ ಹರಿಯುತ್ತಲಿದ್ದರೂ ರಮೇಶನ ಮೈಗೆ ಮುಳ್ಳಿನಂತೆ ಚುಚ್ಚುತ್ತಲಿತ್ತು. ಹಾಗೆ ದಾರಿಯಲ್ಲಿ ಬಿದ್ದುಕೊಂಡಿರುವುದು ಅವನಿಗೆ ಒಪ್ಪಿಗೆಯಾಗಲಿಲ್ಲ. ಹೆಂಡತಿಮಕ್ಕಳನ್ನು ನೋಡುವ ಆಶೆ ಒತ್ತೊತ್ತಿ ಬರತೊಡಗಿತು. ಬಹಳ ಕಷ್ಟದಿಂದ ಎದ್ದು ನಿಂತುಕೊಂಡು ತುಂಬಿದ ಆಶೆ ಯಿಂದ ಬಾಡಿದ ಕಣ್ಣುಗಳನ್ನು ತೆರೆದು ತಿರುಗಿ ನೋಡಿದನು.

ಅಲ್ಲಿಯೇ ಜಿಲ್ಲೆಯ ಹೆಸರುವಾಸಿ ಅರಸುಕಂಬಳವಾಗುವುದೆಂಬುದನ್ನು ಕೇಳಿದ್ದ. ಆದರೆ ಅದನ್ನು ನೋಡುವ ಸಂದರ್ಭ ಅವನಿಗೆ ಒದಗಿಬಂದಿರಲಿಲ್ಲ. ಬಹಳ ಕಷ್ಟದಿಂದ ಇನ್ನೂ ಹತ್ತು ಹೆಜ್ಜೆ ಮುಂದಕ್ಕೆ ನಡೆದ. ಆಗ್ಗೆ ಅವನ ಸಂಪೂರ್ಣ ಶಕ್ತಿ ಕುಸಿದು ಬಿದ್ದಿತ್ತು. ಮೈಯಲ್ಲಿ ಸ್ವಲ್ಪವೂ ತ್ರಾಣಯಿದ್ದಿಲ್ಲ. ನಾಲಗೆ ಒಳಗೆ ಎಳೆದು ಮಾತು ಬಿದ್ದುಹೋಗಿತ್ತು. ಕಣ್ಣುಗಳು ಮಂದವಾಗಿ ಎದುರಿ ಗಿರುವ ಪ್ರಪಂಚ ಸರಿಯಾಗಿ ಕಾಣದಾದವು. ದಾರಿಯ ಬದಿಯಲ್ಲಿರುವ ಮರ ವೊಂದನ್ನು ಗಟ್ಟಿಯಾಗಿ ಅಪ್ಪಿ ಹಿಡಿದುಕೊಂಡನು. ಹಿಂದೆ ನಡೆದ ಎಲ್ಲಾ ಘಟನೆಗಳನ್ನು ನೆನೆದು ಗಳಗಳ ಅತ್ತನು. ಮೂಗಿನಲ್ಲಿ ನೆತ್ತರು ಪಟಪಟ ಉದುರತೊಡಗಿತು. ದಾರಿಯಲ್ಲಿ ಬಿದ್ದುಸಾಯುವ ಸ್ಥಿತಿ ಬಂದೊದಗಿತೋ

ಎಂದು ಬಿಕ್ಕಿದನು. ಮತ್ತೆ ಮೆಲ್ಲನೆ ಮರದ ಬುಡದಲ್ಲಿ ಕುಳಿತುಕೊಂಡು ಕಾಲುಗಳನ್ನು ಮುಂದಕ್ಕೆ ನೀಡಿ ಒರಗಿಕೊಂಡನು. ದಾರಿಯಲ್ಲಿ ಯಾರಾದರೂ ಹೋಗುತ್ತಾರೋ ಎಂಬುದೂ ಕಾಣುತ್ತಿದ್ದಿಲ್ಲ. ಬಾಯಾರಿಕೆಯಿಂದ ಎದೆ ಸುಟ್ಟು ಉಸಿರು ಕಟ್ಟುತ್ತಲಿತ್ತು. ಆಗ ನರಿಗಳು ಕೂಗುತ್ತಿರುವುದು ಅವನಿಗೆ ಕೇಳಿತು. ಸಾಯುವಾಗ ಯಾರೂ ಹತ್ತಿರ ಇಲ್ಲದವನಿಗೆ ಹಿಂಸ್ರಮೃಗಗಳ ಧ್ವನಿಯು ಕರ್ಕಶವಾಗಿ ಕೇಳಲಾರದು! ಮೈಯಲ್ಲಿ, ಮನಸ್ಸಿನಲ್ಲಿ, ಶ್ವಾಸದಲ್ಲಿ ತುಂಬಿರುವ ಅಸಂಖ್ಯ ಆಶೆಗಳನ್ನು ನೆನೆದು ತುಂಬಾ ಅತ್ತು, ಕಡೆಗೆ ನಕ್ಕು ಮಲಗಿಕೊಂಡನು.

* * * * *

ಎಂದಿನಂತೆ ಬೆಳಕು ಹರಿಯಿತು. ಜನರು ತಂತಮ್ಮ ನಿತ್ಯದ ಉದ್ಯೋಗ ವನ್ನು ಮಾಡಲು ಹೊರಟರು. ಬೆಳಗ್ಗೆ ಎದ್ದು ಹೊರಗೆ ಹೋಗಿದ್ದ ನಾರಾ ಯಣರಾಯರು ಸುಮಾರು ಹೊತ್ತಾದರೂ ಬೆಳಗ್ಗಿನ ಚಹಾಕ್ಕೆ ಮನೆಗೆ ಬಂದಿರ ಲಿಲ್ಲ. ತುಳಸಿಯು ಮಕ್ಕಳೊಡನೆ ಮಾತಾಡುತ್ತಾ ಮನೆಯ ಜಗಲಿಯಲ್ಲಿ ಕುಳಿತುಕೊಂಡು ಅಂಗಿ ತೊಡಿಸುತ್ತಿದ್ದಳು. ಮನೆಗೆ ಬೇಕಾಗಿರುವ ಸಾಮಾ ನುಗಳನ್ನು ಕೇಳಿಹೋಗಲು ಅಂಗಡಿಯಿಂದ ಬಂದಿರುವ ಆಳನ್ನು ತುಳಸಿಯ ತಾಯಿಯು ಕರೆದು,

"ನಾರಾಯಣ ಚಹಾಕ್ಕೆ ಏನು ಬರಲಿಲ್ಲ?" ಎಂದು ಕೇಳಿದರು. ಅದಕ್ಕೆ,

"ಕಾರ್ನಾಡಿನ ಆಚೆಮೈಯಲ್ಲಿ ಯಾರೋ ರಾತ್ರಿಯಲ್ಲಿ ದಾರಿಯ ಬದಿಯಲ್ಲಿಯೆ ಸತ್ತು ಬಿದ್ದಿರುವರಂತೆ. ಹೆಣವನ್ನು ನರಿಗಳೋ ಬೇರೆ ಏನೋ ತಿಂದು ಹರಿದು ಹಾಕಿರುವುದಂತೆ. ಬಹುಶಃ ಮೂಲ್ಕಿ ಸ್ಟೇಶನ್ ಇನ್ಸ್‌ಪೆಕ್ಟರರ ಜತೆಗೆ ಯಜಮಾನರೂ ಅಲ್ಲಿಗೆ ಹೋಗಿರುವರೋ ಏನೋ. ಸತ್ತವನ ಗುರುತು ಆಗುವುದಿಲ್ಲ. ಮಾಂಸವನ್ನೆಲ್ಲ ತಿಂದು ತೀರಿಸಿವೆ, ಎಂದು ಬೆಳಗ್ಗಿನ ಬಸ್ಸಿನಲ್ಲಿ ಬಂದವರು ಹೇಳುತ್ತಿದ್ದರು" ಎಂಬುದಾಗಿ ಉತ್ತರ ಬಂತು.

ಆ ಮಾತಿಗೆ ತುಳಸಿಯ ತಾಯಿ ಉಸ್ಸೆಂತ ಉಸಿರುಗರೆದರು. ತುಳಸಿಯು,

"ಈ ರೇಶನಿನ ಕಾಲದಲ್ಲಿ ಹೊಟ್ಟೆಬಟ್ಟೆಗೆ ಬರಗಾಲ ಬಂದಿರುವಾಗ್ಗೆ

ದಾರಿಯಲ್ಲಿ ಬಿದ್ದು ಸಾಯುವುದಕ್ಕೆ ಕಡಮೆಯಿಲ್ಲ. ದೇವರು ಏಕೆ ಹೀಗೆ ಮಾಡುತ್ತಾನೋ. ಜನ್ಮ ಕೊಡಲೇ ಬಾರದು. ಜನ್ಮಕ್ಕೆ ಬಂದ ನಂತರ ಮರ್ಯಾದೆಯಿಂದ ಬದುಕುವಂತಾಗ ಬೇಕು. ಏನೇ ಆದರೂ ಇಂಥಾ ಕೆಟ್ಟ ಮರಣ ಎಂದಿಗೂ ಯಾರಿಗೂ ಬರಕೂಡದು" ಎಂದಂದಳು.



